

ಆಚಾರ್ಯೋ ವೇದ ಸಂಪನ್ನೋ ವಿಷ್ಣುಭಕ್ತೋ ವಿಮತ್ಸರಃ ।
ಮಂತ್ರಜ್ಞೋ ಮಂತ್ರಭಕ್ತಶ್ಚ ಸದಾಮಂತ್ರಾಶ್ರಯಶ್ಶುಚಿಃ ॥
ಗುರುಭಕ್ತಿ ಸಮಾಯುಕ್ತಃ ಪುರಾಣಜ್ಞೋ ವಿಶೇಷತಃ ।
ಏವಂ ಲಕ್ಷಣ ಸಂಪನ್ನೋ ಗುರುರಿತ್ಯಭಿ ಧೀಯತೆ ॥



ನಮಾಮಿ ನಾರಾಯಣ ಪಾದಪಂಕಜಮ್
ಕರೋಮಿ ನಾರಾಯಣ ಪೂಜನಮ್ ಸದಾ
ವದಾಮಿ ನಾರಾಯಣನಾಮ ನಿರ್ಮಲಮ್
ಸ್ಮರಾಮಿ ನಾರಾಯಣ ತತ್ತ್ವಮವ್ಯಯಮ್.

ಕುಲಶೇಖರಾಳ್ವಾರ್

ಗ್ರಂಥಕರ್ತರು :

ಶ್ರೀ ಜಗದಾಚಾರ್ಯ, ಪದ್ಮವಿಭೂಷಣ, ಮಹಾಮಹಿಮೋಪಾಧ್ಯಾಯ
ಮಹಾವಿದ್ವಾನ್

ಪ್ರ. ಭ. ಅಣ್ಣಂಗರಾಚಾರ್ಯಸ್ವಾಮಿ
ವಿಷ್ಣುಕಾಂಚಿ.

ಅನುವಾದ :

ಶ್ರೀದೇವಿ
ಯಾದವಾದ್ರಿ. : (ಮಂಡ್ಯ)

ಬೆಲೆ : 1—50 ರೂ.

Printed at :
Modern Printers, Bannur Road, Mandya.

# ವಿಷಯಾನುಕ್ರಮಣಿಕೆ


1) ಭೂಮಿಕೆ
2) ಕೃತಜ್ಞತೆ
3) ಶ್ರೀ ರಾಮಾನುಜಾಚಾರ್ಯರ ಅಭಿಧಾನ ವೈಭವ
4) ರಾಜಹಂಸಂ ಭೃಂಗರಾಜಂ – ಯತಿರಾಜಃ ಈಡೇ
5) ಕಪ್ಯಾಸ ಶೃತಿಯ ಅರ್ಥವೂ ಮತ್ತು ದಿವ್ಯ ಪ್ರಬಂಧಗಳು
6) ಶ್ರೀ ಭಗವದ್ರಾಮಾನುಜರ ಶ್ರೀಸೂಕ್ತಿ ಶೈಲಿ
7) ಶ್ರೀರಂಗ ಗದ್ಯ ಶ್ರೀಸೂಕ್ತಿ – ತಿರುವಾಯ್ಮೊಳಿ
8) ಶರಣಾಗತಿ ಗದ್ಯದಲ್ಲಿ ಹಿರಿಮೆಯುಳ್ಳ ಒಂದು ವಿಷಯ
9) ಶ್ರೀ ವೈಕುಂಠ ಗದ್ಯ
10) ಭಗವದ್ ಭಾಷ್ಯಕಾರರು ಮತ್ತು ದಿವ್ಯ ಪ್ರಬಂಧ
11) ತಿರುವಾಯ್ಮೊಳಿಯೇ ಮೂರ್ತಿವತ್ತಾದ ಬ್ರಹ್ಮಸೂತ್ರ ಭಾಷ್ಯ
12) ಶ್ರೀ ವೇದಾಂತಾಚಾರ್ಯರು ದಿವ್ಯ ಪ್ರಬಂಧ
13) ಭಗವದ್ರಾಮಾನುಜರು – ವರದರಾಜಸ್ವಾಮಿ
14) ಶ್ರೀ ರಾಮಾನುಜರು – ಶ್ರೀ ನಾರಾಯಣಸ್ವಾಮಿ (ಮೇಲುಕೋಟೆ)
15) ಯತಿರಾಜ ಸಾರ್ವಭೌಮನ ಜಯಂತ್ಯುತ್ಸವ

# ಭೂಮಿಕೆ.

ಶ್ರೀ ರಾಮಾನುಜ ದರ್ಶನವೆಂದು ಪ್ರಸಿದ್ಧಿ ಪಡೆದಿರುವ ದರ್ಶನಕ್ಕೆ ಮೂಲಾಧಾರವಾದ ಪ್ರಮಾಣವೇದ. ಅದು ಸಂಸ್ಕೃತದಲ್ಲಿಯೂ ದ್ರಾವಿಡದಲ್ಲಿಯೂ ಉಪಲಬ್ಧವಾಗಿದೆ. ಪರತತ್ತ್ವದ ಸ್ವರೂಪ ಸ್ವಭಾವಗಳನ್ನು ನೇರವಾಗಿ ತೋರಿಸಿಕೊಡಬಲ್ಲ ಪ್ರಮಾಣವೇದ. ಸಂಸ್ಕೃತ ವೇದದಲ್ಲಿ ತತ್ತ್ವದ ಪ್ರಕಾಶನ ಮೊಟ್ಟಮೊದಲಾಗಿ ಕಮಲದಲ್ಲಿ ಜನಿಸಿದ ಪ್ರಥಮ ಪುತ್ರನಾದ ನಾನ್‌ಮುಗನಿಗೆ ಪರಮಾತ್ಮನು ಹಂಸವೇಷವನ್ನು ತಾಳಿ ಉಪದೇಶ ಮಾಡಿದುದು. ಅಂತೆಯೇ ಪರಮಾತ್ಮನು "ಜ್ಞಾನಪಿರಾನ್" ಎಂಬ ನಾಮಧೇಯವನ್ನು ವ್ಯತ್ಯನುಗುಣವಾಗಿ ವಹಿಸಿ ಶಠಗೋಪರೆಂಬ ಮುತ್ತೊಬ್ಬರಿಗೆ ಉಪದೇಶ ಮಾಡಿದನು ಶಠಗೋಪರು ಜನ್ಮಪ್ರವೃತ್ತಿ ಜ್ಞಾನಸಂಕೋಚಕವಾದ ದೋಷವನ್ನು ಅಂಟಿಸಿಕೊಳ್ಳದೆ ಪರಿಶುದ್ಧ ಪರಿಪೂರ್ಣ ಜ್ಞಾನವನ್ನು ಪಡೆದು ಪರಮ ಪ್ರಾಪ್ಯನಾದ ಪರಮಾತ್ಮನಲ್ಲಿ ಸೇರಿಕೊಳ್ಳಬೇಕೆಂಬ ತೀವ್ರ ಆಕಾಂಕ್ಷೆಯನ್ನು ವ್ಯಕ್ತಪಡಿಸಿ ಜಗತ್ತಿಗೆ ಅನುಭವ ಗರ್ಭೋಪದೇಶವನ್ನು ತಾವು ಪಡದಂತೆ ನೀಡಿದ ಪರಮೋಪಕಾರಿ.

ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿರುವ ಉಪನಿಷತ್ತುಗಳಲ್ಲಿ ಅಡಗಿರುವ ತತ್ತ್ವ ರಸಾಯನವನ್ನು ಆಚಾರ್ಯಪರಂಪರೆಯಲ್ಲಿ ಲೋಕಕ್ಕೆ ಹರಡಿದ ಮಹಾಮಹಿಮರು ಶ್ರೀ ರಾಮಾನುಜರು. ಅವರ ದರ್ಶನಕ್ಕೆ ಉಭಯ ವೇದಾಂತ ದರ್ಶನವೆಂಬ ಹೆಸರು ಏರ್ಪಟ್ಟಿತು.

ಉಪದೇಶ ಮೂಲಕವಾಗಿ ಧ್ಯಾನಾದಿಗಳ ಒಳಕೆಯಿಂದ ತತ್ತ್ವ ಸಾಕ್ಷಾತ್ಕಾರಕ್ಕೆ ಎಡೆ ಮಾಡಿಕೊಟ್ಟ ಸಂಸ್ಕೃತ ವೇದದಲ್ಲಿ ವಿಪುಲವಾಗಿ ಉಪದಿಷ್ಟವಾದ ಚೇತನ ಪ್ರವೃತ್ತಿ ಎಂಬ ಭಗವತ್ಪ್ರಸಾದ ಪ್ರಾಪಕ ವ್ಯಾಪಾರವೂ ಅನುಭವವೂ ಸಮಕಾಲದಲ್ಲಿ ಶಬ್ದವೂ ಕೇಳಿಬಂದು ಭಗವಂತನ ನಿರ್ಹೇತುಕವಾದ ಪ್ರಸಾದದ ಫಲವಾಗಿ ಭಗವತ್ಪ್ರವೃತ್ತಿ ಜನಿತವಾದ ಚೇತನದಲ್ಲಿ ಮೂಡುವ ಕೃಷ್ಣತತ್ತ್ವದ ತೃಷೆಯೂ ತದಿತರ ವಿರಕ್ತಿಯೂ ದ್ರಾವಿಡ ವೇದದಲ್ಲಿ ವಿಕಾಸಹೊಂದಿದೆ. ಇದರಲ್ಲಿ ಪರಮಾತ್ಮನು ಸ್ವಪ್ರಯತ್ನದಿಂದ ಚೇತನನ ಸ್ವಗತ ಪ್ರಯತ್ನಕ್ಕೆ ಅವಕಾಶ ನೀಡದೆ ತನ್ನಲ್ಲಿಗೆ ಕರೆಸಿಕೊಳ್ಳುತ್ತಾನೆ. ಇದು ಪ್ರಪತ್ತಿ ಮಾರ್ಗ. ಪ್ರಪತ್ತಿ ಅಂತರ ಕವಚವಾದರೆ ಭಕ್ತಿ ಅದಕ್ಕೆ ಅನುಗುಣವಾದ ಬಾಹ್ಯಕವಚವಾಗುತ್ತದೆ.

ಶ್ರೀ ರಾಮಾನುಜಾಚಾರ್ಯರ ಕೊಡುಗೆ ಜಗತ್ತಿಗೆ ಅತಿ ವಿಲಕ್ಷಣವಾದುದು ಸರ್ವ ಶ್ರೇಷ್ಠವಾದುದು. ಅಂತಹ ಕೊಡುಗೆಗೆ ಬೇಕಾದ ಜ್ಞಾನಾನುಷ್ಠಾನ ಸಂಪತ್ತು ಅವರಲ್ಲಿ ಪೂರ್ಣವಾಗಿ ತುಂಬಿಕೊಂಡಿದ್ದಿತು. ಪ್ರಥಮ ದರ್ಶನ ಪಡೆದವರು ಶಠಕೋಪರು. ಉಭಯ ವೇದಾಂತಗಳನ್ನು ಬಳಸಿ ಶಠಕೋಪರಂತೆ ದರ್ಶನ ಭಾಗ್ಯವನ್ನು ಪಡೆದವರು ಶ್ರೀ ರಾಮಾನುಜರು.

ಅವರು ಹರಡಿದ ಮತ ಕ್ರಮವಾಗಿ ಪರಮ ವೈದಿಕ ಸಿದ್ಧಾಂತ. ಉಭಯ ವೇದಾಂತ ದರ್ಶನ ವಿಶಿಷ್ಟಾದ್ವೈತ ವೇದಾಂತ ಎಂಬುದಾಗಿ ಪ್ರಸಿದ್ಧಿಗೆ ಬಂದಿದೆ. ಇಂತಹ ಆಚಾರ್ಯರು ಜನಸ್ತೋಮಕ್ಕೆ ಪರಮಾನಂದವನ್ನು ಅನುಭವ ಗೋಚರಕ್ಕೆ ತರಿಸಿಕೊಡುವ ಅವತಾರ ಪುರುಷರಲ್ಲಿ ಅತಿ ಗಣನೀಯರಾದವರು ಎಂಬುದು ಲೋಕಸಮ್ಮತ.

ಪ್ರಕೃತ ಜಗದಾಚಾರ್ಯ ಉ. ವೇ. ಶ್ರೀ ಕಾಂಚೀ ಪ್ರತಿವಾದಿ ಭಯಂಕರಂ ಮಹಾವಿದ್ವಾನ್ ಅಣ್ಣಂಗರಾಚಾರ್ಯ ಸ್ವಾಮಿಗಳು ಉಭಯ ವೇದಾಂತಗಳನ್ನು ಕೂಲಂಕುಷವಾಗಿ ಅಧ್ಯಯನಮಾಡಿ ತಮ್ಮ ಅನುಭವವನ್ನು ಜಗತ್ತಿಗೆ ಅನೇಕ ಭಾಷೆಗಳಲ್ಲಿ ಪ್ರಕಟಿಸಿದ್ದಾರೆ.

ಶ್ರೀ ರಾಮಾನುಜರ ವಿಷಯವಾಗಿ ತಮಿಳು ಭಾಷೆಯಲ್ಲಿ ಬರೆದಿರುವ ವ್ಯಾಸವು ಅದನ್ನು ಅವಲಂಬಿಸಿರುವ ಇನ್ನೂ ಕೆಲವು ವಿಷಯಗಳನ್ನೂ ಅನುವಾದ ರೂಪವಲ್ಲಿ ಈ ಗ್ರಂಥವಲ್ಲಿ ಕನ್ನಡಿಸಲಾಗಿದೆ. ಪ್ರಯತ್ನವು ಶ್ಲಾಘ್ಯವಾದುದು. ಯತ್ನವು ಸಫಲವಾಗಬೇಕೆಂದು ಹಾರೈಯಿಸುತ್ತೇನೆ.

ಯಾದವಾಚಲ ತಿರುವಾಯ್ಮೊಳಿ,
ತಿರುನಾರಾಣಯ್ಯಂಗಾರ್ಯ.

# ಕೃತಜ್ಞತೆ.

ಆಚಾರ್ಯರ್ ಎಂಬೆರುಮಾನಾರ್ ಜೀಯರ್ ತಿರುವಡಿಗಳೇ ಶರಣಂ ॥

"ಶ್ರೀ ರಾಮಾನುಜ ಭೂಷಣ" ವೆಂಬ ಈ ಚಿಕ್ಕ ಕೃತಿಯು ಕೇವಲ ಅನುವಾದ. ಅದರಲ್ಲಿರುವ ವಿಷಯ ವಿಶೇಷ ಹಿರಿಮೆಗಳೆಲ್ಲಾ ಮೂಲ ರಚಯಿತರದ್ದು.

ಶ್ರೀ ಭಗವದ್ರಾಮಾನುಜರ ಮೇಧಾವಿಲಾಸವನ್ನು ಭಗವದ್ಭಕ್ತಿಯನ್ನು ಅವರು ತೋರಿಸುತ್ತಿದ್ದ ಅರ್ಥ ಸೌಕ್ಷ್ಮವನ್ನು ಈ ಪುಸ್ತಕದ ಪ್ರತಿ ಒಂದು ಲೇಖನದಲ್ಲಿಯೂ ಕಾಣಬಹುದು. ಶ್ರೀ ರಾಮಾನುಜಾಚಾರ್ಯರು ಉಭಯ ವೇದ ವೇದಾಂತ ಪ್ರವರ್ತಕಾಚಾರ್ಯರೆಂಬ ವಿಷಯವನ್ನು ಈ ಕೃತಿಯ ಪ್ರತಿ ವಿಷಯದಿಂದಲೂ ನಾವು ಮನಗಾಣ ಬಹುದು. ದಿವ್ಯ ಪ್ರಬಂಧಗಳನ್ನು ವೇದವಾಕ್ಯಗಳೊಡನೆ ಸರಿಸಮಾನವಾಗಿ ತೋರಿಸಿ ದ್ರಾವಿಡವೇದದ ಹಿರಿಮೆಯನ್ನು ಪ್ರತ್ಯಕ್ಷಗೊಳಿಸಿರುತ್ತಾರೆ. ನಮ್ಮ ಕನ್ನಡಿಗರು ಈ ಅಂಶವನ್ನು ಮನಗಾಣಬಹುದು.

ಭಗವದ್ರಾಮಾನುಜರ ಕೃತಿಗಳನ್ನು ಆಳ್ವಾನ್, ಭಟ್ಟರು, ನಂಬಿಳ್ಳೈ ನಂಜೀಯರ್ ಮತ್ತು ವೇದಾಂತ ದೇಶಿಕರು ಅತ್ಯಂತ ಆದರದಿಂದ ಅನುಸಂಧಾನಮಾಡುತ್ತಿದ್ದರು. ನಾವೂ ನಮ್ಮ ಶ್ರೀ ವೈಷ್ಣವ ಶ್ರೀಯನ್ನು ಅನು ಸಂಧಾನಮಾಡಿ ಅದರ ಶ್ರೇಷ್ಠತೆ ಮತ್ತು ಹಿರಿಮೆಯನ್ನು ತಿಳಿದುಕೊಳ್ಳಬಹುದು.

ಪ್ರಪಂಚದಲ್ಲಿ ಪ್ರತಿ ಒಂದು ಕೆಲಸಕ್ಕೂ ಆಚಾರ್ಯಾನುಗ್ರಹವೇ ಮುಖ್ಯವೆಂಬುದು ಪ್ರಸಿದ್ಧ. ನಾನು ಒಬ್ಬ ಅಕಿಂಚನಳು. ಆದರೆ ಶ್ರೀ ವೈಷ್ಣವ ಪರಮ ಭಾಗವತೋತ್ತಮರ ಕೃಪಾಕಟಾಕ್ಷದಿಂದ ಕೆಲವಾರು ಹಿರಿಯರ ಆಶ್ರಯದಲ್ಲಿ ದಿವ್ಯಪ್ರಬಂಧಗಳನ್ನು ಅಧ್ಯಯನ ಮಾಡುವ ಭಾಗ್ಯ ದೊರೆತಿದೆ.

ತಿರುನಾರಾಯಣಪುರಂ ಶ್ರೀ ಉ. ವೇ. ಆಳ್ವಾರ್ ತಿರುಮಾಳ್ಯೆ ಐಯ್ಯಂಗಾರ್ಯ ಸ್ವಾಮಿಯವರು ನಮ್ಮ ಪಿತೃಗೃಹಕ್ಕೆ ಆಚಾರ್ಯರು. ಆದರೆ ನಮ್ಮಗಳಿಗೆ ಎಲ್ಲಾ ವಿಧದಲ್ಲಿಯೂ ಕೃಪಾಪ್ರಸನ್ನಾಚಾರ್ಯರಾಗಿರುತ್ತಾರೆ. ಅವರು ಒಂದು ದಿನ ಒಂದು ವಿಳಾಸವನ್ನು ಕೊಟ್ಟು ಇದರಿಂದ ಹಿಂದೀ ಭಾಷೆಯಲ್ಲಿರುವ ದಿವ್ಯಪ್ರಬಂಧಗಳನ್ನು ತರಿಸಿ ನೋಡಮ್ಮ ಎಂದರು. ಅದೇ ಪ್ರಕಾರ ಕಾಂಚೀ ಮಹಾವಿದ್ವಾನ್ ಪ್ರ. ಭ. ಅಣ್ಣಂಗರಾಚಾರ್ಯಸ್ವಾಮಿಯವರನ್ನು ಪ್ರಾರ್ಥಿಸಿದೆನು. ಅವರು ತಮ್ಮಲ್ಲಿರುವ ಅನೇಕ ಸದ್ಗ್ರಂಥಗಳನ್ನು ಅನುಗ್ರಹ ಪೂರ್ವಕವಾಗಿ ಕಳುಹಿಸಿದರು. ಆ ಕೃತಿ ಗಳ ಅಧ್ಯಯನದಿಂದ ಜೀವನದ ಪ್ರತಿಕ್ಷಣವೂ, ಮರುಕಾಂತಾರದಲ್ಲಿ ಶೀತಲಜಲದಾಸದ ಹಾಗೆ ಸಂಸಾರವೆಂಬ ಈ ಬೇಗಾಡಿ ನಲ್ಲಿ ಶಾಂತಿಯನ್ನು ನೀಡುತ್ತಿದೆ. ಅಮೃತಪಾನದಿಂದ ಜರಾಮರಣವುಂಟಾಗುವುದಿಲ್ಲವಂತೆ ಈ ದಿವ್ಯ ಪ್ರಬಂಧ ಅನುಸಂಧಾನದಿಂದ ಇಹಲೋಕದ ಸರ್ವದುಃಖವೂ ನಶಿಸಿಹೋಗುತ್ತದೆ. ಈ ಈರ್ವರು ಪರಮ ಭಾಗವತೋತ್ತಮರಿಗೆ ಹೃತ್ಪೂರ್ವಕವಾಗಿ ಕೃತಜ್ಞತೆಯನ್ನು ಶಿರಸಾ ಸಲ್ಲಿಸುತ್ತೇನೆ. ಈಗ್ಗೆ ಎರಡು ವರ್ಷದಲ್ಲಿ ಕಾರ್ಯಾರ್ಥವಾಗಿ ಮಂದ್ರಾಸಿಗೆ ಹೋಗಿದ್ದೆನು. ಆಗ ತಿರುವಲ್ಲಿಕೇಣಿಯಲ್ಲಿ ನೆಲೆಸಿರುವ ಶ್ರೀಮತಿ ಎಂ. ಎ ಕೃಷ್ಣಮ್ಮ, ಅಡ್ವೋಕೇಟ್ ರವರು ನನಗೆ ಆತ್ಮೀಯರಾಗಿದ್ದರು. ಅವರು ತಮ್ಮಲ್ಲಿರುವ ಅನೇಕ ತಮಿಳು ಪುಸ್ತಕಗಳನ್ನು ಕೊಟ್ಟು ಇದನ್ನು ಕನ್ನಡಕ್ಕೆ ಭಾಷಾಂತರಿಸು

ಎಂದರು. ನನಗೆ ತಮಿಳು ಭಾಷೆಯಲ್ಲಿ ವಿಶೇಷ ಪರಿಚಯವಿಲ್ಲ. ಆದ್ದರಿಂದ ಕೇವಲ ಓದುತ್ತಿದ್ದೆನು. ಆದರೆ ಉದಾರಿಗಳಾದ ಅವರು ಅಷ್ಟಕ್ಕೆ ನಿಲ್ಲದೆ ಮೂಲಗ್ರಂಥಕರ್ತರಾದ ಮಹಾವಿದ್ವಾನ್ ಅಣ್ಣಂಗರಾಚಾರ್ಯ ಸ್ವಾಮಿಯವರನ್ನು ತಾವೇ ಕೇಳಿ ಈ ಅನುವಾದ ಕಾರ್ಯಕ್ಕೆ ಅವರ ಒಪ್ಪಿಗೆಯನ್ನು ತರಿಸಿಕೊಟ್ಟಿರುತ್ತಾರೆ. ಅವರು ನನ್ನನ್ನು ತಮ್ಮ ಸಹೋದರಿಯಂತೆ ನೋಡಿಕೊಳ್ಳುತ್ತಿದ್ದರು. ಈ ಭಗವತ್ಕೈಂಕರ್ಯಕ್ಕೆ ಅವರ ಪ್ರೇರಣೆಯೇ ಕಾರಣ. ಅವರಿಗೆ ನನ್ನ ಮನಃಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಆದರೆ ಇಷ್ಟೆಲ್ಲಾ ಹಿರಿಯರ ಆಶೀರ್ವಾದರೂಪವಾಗಿ ಲೇಖನವನ್ನು ಅನುವಾದಿಸಿದರೂ ಅಪರಿಚಿತ ವಿಷಯ. ಅರಿಯದ ಭಾಷೆ. ಈ ಗೊಂದಲಗಳಿಂದಾಗಿ ಆಗುವ ಅಶುದ್ಧಿಯನ್ನು ಶುದ್ಧಪಡಿಸುವಂತಹ ಬೃಹಸ್ಪತಿಯ ಅವಶ್ಯಕತೆ ಉಂಟಾಯಿತು. ನನ್ನ ಲೇಖನದಲ್ಲಿ ಆಗುವ ತಪ್ಪುಗಳನ್ನು ಅಂದರೆ ತಮಿಳು ಅಕ್ಷರವನ್ನು ಕನ್ನಡದಲ್ಲಿ ಭಾಷಾಂತರಿಸಿದರೆ ವಿದ್ವಾಂಸರು ಮಾತ್ರ ಬರೆಯಲು ಸಾಧ್ಯವೇ ಹೊರತು ನಮ್ಮಂತಹವರಿಂದ ಅಸಾಧ್ಯ. ಹಾಗೂ ಇದು ಒಂದು ನನ್ನ ಅಧಿಕ ಪ್ರಸಂಗಿತನವೆಂದು ಒಂದು ವರ್ಷದಿಂದ ಹಾಗೆ ಇಟ್ಟಿದ್ದೆನು.

ಕೃಪಾಪ್ರಸನ್ನಾಚಾರ್ಯರಾದ ಭಗವದ್ರಾಮಾನುಜರ ಅನುಗ್ರಹಕ್ಕೆ ಪಾತ್ರರಾಗುವರಿಗುಂಟಾಗುವ ತೊಂದರೆಗಳನ್ನು ಅವರ ಭಕ್ತರುಗಳೇ ಪರಿಹರಿಸುವಂತೆ ತಿರುಮಾಲಿರುಂಜೋಲೈ ಶ್ರೀ ಉ. ವೇ. ತಿರುನಾರಣಯ್ಯಂಗಾರ್ಯ ಸ್ವಾಮಿಯವರು ನನ್ನ ಈ ಲೇಖನವನ್ನು ಅಕ್ಷರ - ಅಕ್ಷರವಾಕ್ಯ - ವಾಕ್ಯವೆನ್ನುವಂತೆ ಶುದ್ಧಪಡಿಸಿ ಮುದ್ರಣವನ್ನು ಮಾಡಬೇಕೆಂದು ಪ್ರೋತ್ಸಾಹಿಸಿದರು. ಅವರು ಹೇಳಿದ ಧೈರ್ಯ ಪ್ರೋತ್ಸಾಹಗಳಿಂದಲೇ ಈ ಕಿಂಚಿತ್ ಸೇವೆಯು ಸಾಧ್ಯವಾಯಿತು. ಸಂಕ್ಷಿಪ್ತವಾಗಿ ತಿಳಿಸುವುದಾದರೆ ಅವರು ನನ್ನಿಂದ ಅಕ್ಷರಕ್ಷರ ಬರೆಸಿದರೆಂದರೂ ತಪ್ಪಾಗಲಾರದು. ಕೃತಜ್ಞತೆಯನ್ನು ವ್ಯಕ್ತಪಡಿಸಲಾಗದಂತೆ ಗದ್ಗದಿತಳಾಗಿ ಮೌನವನ್ನು ಅವಲಂಬಿಸಿರುತ್ತೇನೆ.

ಇಷ್ಟೆಲ್ಲಾ ಆಯಿತು. ನಮ್ಮ ಪುಣ್ಯಭೂಮಿಯಲ್ಲಿ ಮಹಾವಿದ್ವಾಂಸರುಗಳ ದಿವ್ಯಪ್ರಬಂಧಗಳು ಅಸಂಖ್ಯಾತವಾಗಿರುವಾಗ ನನ್ನ ಅನುವಾದದ ಅವಶ್ಯಕತೆ ಇಲ್ಲವೆಂದು ನಿಶ್ಚಿಂತೆಯಿಂದ ಇದ್ದೆನು. ಆದರೆ ಭಗವಂತನು ತನ್ನ ಕಲ್ಯಾಣಗುಣಗಳನ್ನು ಪ್ರಕಟಪಡಿಸಲು ನಾನಾರೀತಿಯಿಂದ ಅನುಗ್ರಹಮಾಡುತ್ತಾನೆ. ಚೇತನರನ್ನು ಸಂತುಷ್ಟಗೊಳಿಸಲು ಹಾಡಿಸಿ, ನುತಿಸಿಸಿ ತನ್ನ ಅನುಪಮ ಗುಣಗಾನವನ್ನು ಮಾಡಿಸುತ್ತಾನೆ. ಈ ಕೃತಿಯು ತಮಿಳಿನಲ್ಲಿ ಇದ್ದುದರಿಂದ ಕನ್ನಡಿಗರು ಅನುಭವಿಸಲೆಂದು, ನನ್ನ ತಮ್ಮ ಚಿ॥ ಎಂ. ಆರ್. ತಿರುನಾರಾಯಣನ್, ಶ್ರೀ ರೇಡಿಯೋ ಎಲೆಕ್ಟ್ರಿಕಲ್ಸ್, ಮಂಡ್ಯ ಇವರು ಪ್ರಕಾಶಪಡಿಸುವೆನೆಂದು ಉದಾರತೆಯಿಂದ ಈ ಕೈಂಕರ್ಯವನ್ನು ಮಾಡುತ್ತಿದ್ದಾರೆ. ಇವರಿಗೆ ಕೃತಜ್ಞತೆಗೆ ಬದಲಾಗಿ ಭಗವದ್ರಾಮಾನುಜರ ಕೃಪೆಯು ಉಂಟಾಗಲೆಂದು ಮನಃಪೂರ್ವಕವಾಗಿ ಆಶೀರ್ವದಿಸುತ್ತೇನೆ.

ಈ ಪುಟ್ಟ ಅನುವಾದದ ಕೃತಿಯನ್ನು ನಮ್ಮ ತಂದೆ ಶ್ರೀ ಉ.ವೇ. ರಂಗಯ್ಯನ್ ರಂಗಸ್ವಾಮಿ ಅಯ್ಯಂಗಾರ್ಯರ (ಆಚಾರ್ಯರ ತಿರುವಡಿಗಳನ್ನು ಸೇರಿರುವ) ಸ್ಮೃತಿರೂಪವಾಗಿ ಅವರ ಚರಣಾರವಿಂದಗಳಲ್ಲಿ ಸಮರ್ಪಿಸುತ್ತೇನೆ.



"ಈ ಭಗವದ್ರಾಮಾನುಜಭೂಷಣ" ಎಂಬ ಈ ಕೃತಿಯನ್ನು 1970ನೇ ಇಸವಿ ಶ್ರೀ ಭಗವದ್ರಾಮಾನುಜಾಚಾರ್ಯರ ತಿರುನಕ್ಷತ್ರದ ಪ್ರಯುಕ್ತ ಮುದ್ರಣ ಮಾಡಬೇಕೆಂದು ಮೈಸೂರಿನ ಅಶ್ವಿನಿ ಪ್ರಿಂಟರ್ಸ್ ರವರಿಗೆ ಕೊಟ್ಟಿದ್ದೆವು. ಆದರೆ ಕಾರಣಾಂತರದಿಂದ ಮುದ್ರಣದ ಕೆಲಸ ಸಾಧ್ಯವಾಗಲಿಲ್ಲ. ಈ ಮೊದಲು "ಶ್ರೀ ಗೋದಾ ಶ್ರೀಸೂಕ್ತಿ ಮಂಜರಿ" ಎಂಬ ಕೃತಿಯನ್ನು ಮಂಡ್ಯದ ಮಾಡರ್ನ್ ಪ್ರಿಂಟರ್ಸ್ ರವರು ಸುಂದರವಾಗಿ ಮುದ್ರಿಸಿಕೊಟ್ಟಿರುತ್ತಾರೆ. ಪುನಃ ಅವರು ಈ ಕೃತಿಯನ್ನು ಸಹ ಮುದ್ರಿಸಿ ಭಗವದ್ರಾಮಾನುಜಾಚಾರ್ಯರ ಜಯಂತ್ಯುತ್ಸವದ ಸಂದರ್ಭದಲ್ಲಿ ಪ್ರಕಟವಾಗಲು ನೆರವಾಗಿರುತ್ತಾರೆ.

ಮಂಡ್ಯದ ಮುನಿಸಿಪಲ್ ಹೈಸ್ಕೂಲಿನ ಕನ್ನಡ ಪಂಡಿತರಾದ ಶ್ರೀ ಉ. ವೇ. ಕೆ. ಎ. ರಾಮಸ್ವಾಮಿಯವರು ಅತ್ಯಂತ ಆದರದಿಂದ ಈ ಅನುವಾದದ ಪ್ರೂಫ್ ಕರೆಕ್ಷನ್ ಸಹ ಮಾಡಿಕೊಟ್ಟಿರುತ್ತಾರೆ. ಅವರಿಗೆ ನನ್ನ ವಿನಯಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅವರು ಸಮಯನಿಷ್ಠರು. ಸಕಾಲಕ್ಕೆ ಸರಿಯಾಗಿ ಪ್ರೂಫ್ ಕರೆಕ್ಷನ್ ಮಾಡಿಕೊಟ್ಟಿದ್ದರಿಂದ ಈ ವರ್ಷವಾದರೂ ನಾವು ಆಚಾರ್ಯರ ಜಯಂತ್ಯುತ್ಸವಕ್ಕೆ ಕೈಂಕರ್ಯ ರೂಪದಲ್ಲಿ ಅವರ ಚರಣಾರವಿಂದಗಳಲ್ಲಿ ಸಮರ್ಪಿಸಲು ಸಾಧ್ಯವಾಯಿತು. ಇಂತಹ ಸಹಾಯಕರು ಯಾವಾಗಲೂ ದೊರೆಯಲೆಂದು ಭಗವದ್ರಾಮಾನುಜರಲ್ಲಿಯೂ ಮತ್ತು ಶ್ರೀ ಭೂ ನೀಳಾ ಸಮೇತನಾದ ಯತಿರಾಜ ಸಂಪತ್ಕುಮಾರನಲ್ಲಿಯೂ ಪ್ರಾರ್ಥಿಸುತ್ತೇನೆ.

ಶ್ರೀದೇವಿ.
ಯಾದವಾದ್ರಿ. (ಮಂಡ್ಯ)



ಆಳ್ವಾರ್ ಆಚಾರ್ಯರ್ ಎಂಬೆರುಮಾನಾರ್ ಜೀಯರ್ ತಿರುವಡಿಗಳೇ ಶರಣಂ ॥

# ಶ್ರೀ ರಾಮಾನುಜಾಚಾರ್ಯರ ಅಭಿಧಾನ ವೈಭವ.

ಶ್ರೀ ಭಗವದ್ರಾಮಾನುಜಾಚಾರ್ಯರ ದಿವ್ಯ ಕಲ್ಯಾಣ ಗುಣಗಳ ವಿಷಯವಾಗಿಯೋ, ದಿವ್ಯ ಚರಿತ್ರೆಗಳ ವಿಷಯವಾಗಿಯೋ, ಅವರ ಶ್ರೀ ಸೂಕ್ತಿಗಳಲ್ಲಿ ಇರುವ ವಿಶೇಷಗಳನ್ನು ಕುರಿತೋ ಏನಾದರೂ ಒಂದು ರೀತಿಯಲ್ಲಿ ಅವರನ್ನು ಕುರಿತ ಅನುಭವ ನಮಗೆ ಪರಮ ಪವಿತ್ರವಾದ್ದರಿಂದ ಇಲ್ಲಿ ಪ್ರಥಮತಃ ನಾವು ಅವರ ಮಂಗಳಕರವಾದ ಶುಭ ನಾಮಸ್ಮರಣೆಯನ್ನು ಮಾಡಬಹುದಾಗಿದೆ.

ಈ ಆಚಾರ್ಯರಿಗೆ " ರಾಮಾನುಜ " ಎಂದು ಏತಕ್ಕಾಗಿ ನಾಮಕರಣ ಮಾಡಿದರೆಂದು ನಾವು ಅನುಸಂಧಾನ ಮಾಡಿದ್ದೇ ಆದರೆ. ಪೂರ್ವೀಕರ ಗ್ರಂಥಗಳಿಂದ ಈ ರೀತಿ ತಿಳಿದುಬರುತ್ತದೆ—ರಾಮಾನುಜನೆನ್ನುವ ನುಡಿ ಶ್ರೀರಾಮಚಂದ್ರನ ತಮ್ಮ ಎಂಬ ಅರ್ಥವುಳ್ಳದ್ದು. ದಶರಥಾತ್ಮಜನಾದ ಶ್ರೀರಾಮನ ತಮ್ಮ ಲಕ್ಷ್ಮಣನೆಂಬುವ. ಇವನಿಗೆ ಹೇಗೆ ಎಡಬಿಡದೆ ಕೈಂಕರ್ಯ ಮಾಡುವುದೇ ಧ್ಯೇಯವಾಗಿತ್ತೋ ಹಾಗೆಯೇ ಭಗವದ್ರಾಮಾನುಜಾಚಾರ್ಯರಿಗೂ ಸಹ ಕೈಂಕರ್ಯವೇ ಸರ್ವ ಶ್ರೇಷ್ಠವೆಂದು ತಿಳಿದು ಆಚರಿಸುವರೆಂದು ಅವರ ಅವತಾರ ಸಮಯದಲ್ಲಿಯೇ ಯೋಗದೃಷ್ಟಿಯಿಂದ ತಿಳಿದವರಾದ ಇವರ ಸೋದರಮಾವ "ತಿರುಮಲೈ ನಂಬಿ" ಎನ್ನುವ ಆಚಾರ್ಯರು ಇವರಿಗೆ ನಾಮಕರಣ ಮಾಡಿದರು.

ಶ್ರೀರಾಮಚಂದ್ರನು ಕೈಕೆಯಿ ವರಪ್ರಾರ್ಥನೆಯಂತೆ ಅರಣ್ಯಕ್ಕೆ ತೆರಳುವಾಗ ಲಕ್ಷ್ಮಣನು ತನ್ನನ್ನೂ ಕರೆದು ಕೊಂಡು ಹೋಗಬೇಕೆಂದು ನಿರ್ಬಂಧದಿಂದ ಪ್ರಾರ್ಥಿಸಿದನು. ತಾನೂ ಕಾಡಿಗೆ ಹೋಗಬೇಕೆಂದುದು ಏತಕ್ಕೆಂದರೆ, "ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಷುರಂಸ್ಯತೇ, ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಃ ಸ್ವಪತಶ್ಚತೇ" ಎಂದು ರಾಮಾಯಣದಲ್ಲಿ ಲಕ್ಷ್ಮಣನು ಹೇಳುವ ಶ್ಲೋಕವಾಗಿದೆ.

"ರಾಮನು ವೈದೇಹಿಯೊಂದಿಗೆ ಚಿತ್ರಕೂಟದ ತಪ್ಪಲುಗಳಲ್ಲಿ ವಿಹರಿಸುವಾಗ" ನಾನು "ಒಳಿವಿಲ್ ಕಾಲ ಮೆಲ್ಲಾಮ್ ಉಡನಾಯ್ ಮನ್ನಿವಳಿವಿಲಾ ಅಡಿಮೈಶೆಯ್ಯವೇಂಡುಂ" ಎನ್ನುವುದು ಶ್ಲೋಕದ ಭಾವ. ಲಕ್ಷ್ಮಣನು ತನ್ನ ಜೀವನವನ್ನು ಸೇವೆ ಮಾಡುವುದರಲ್ಲಿಯೇ ಕಳೆದನು. ಅದೇ ರೀತಿ ಆಚಾರ್ಯರಾದ ಭಗವದ್ರಾಮಾನುಜರೂ ಕೈಂಕರ್ಯ ತತ್ಪರರಾಗಿಯೇ ಇದ್ದರೆಂಬುದು ಅವರ ದಿವ್ಯ ಚರಿತ್ರೆಗಳಿಂದ ತಿಳಿದುಬರುತ್ತದೆ. "ತೆನ್ನರಂಗರ್ ಶೆಲ್ವಮ್ ಮುಱ್ಱುಂ ತಿರುತ್ತಿವೈತ್ತದುಮ್ ಮಾರನುರೈ ಶೆಯ್ದ ತಮಿಳ್ ಮಱೈ ವಳರ್ತ್ತದುಮ್ ಮೊದಲಾದ ಕಾರ್ಯಗಳು ಅತ್ಯಂತ ಹಿರಿಮೆಯುಳ್ಳ ಕೈಂಕರ್ಯವಲ್ಲವೇ ? ಈ ಕಾರಣಗಳಿಂದ ಆಚಾರ್ಯರಿಗೆ ಈ ಶ್ರೇಷ್ಠ ಹೆಸರನ್ನು ಇಟ್ಟಿದ್ದು ಸಮರ್ಪಕ ವಾಗಿ ಇದೆ. ಲಕ್ಷ್ಮಣಮುನಿ ಎಂದೂ, ಇಳೈಯಾಳ್ವಾರ್ ಎಂದೂ ಪ್ರಕಾಶಿಸುವ ಅವರ ದಿವ್ಯ ನಾಮಗಳೂ ಇದನ್ನೇ ದೃಢಪಡಿಸುತ್ತವೆ.

ಇನ್ನು ರಾಮಾನುಜನೆನ್ನುವ ಹೆಸರು ಹೇಗೆ ಲಕ್ಷ್ಮಣನಿಗೆ ಇದೆಯೋ ಹಾಗೆಯೇ 'ಬಲರಾಮನ' ತಮ್ಮ ಎಂಬ ಕಾರಣದಿಂದ ಕೃಷ್ಣಪರಮಾತ್ಮನನ್ನು ರಾಮಾನುಜನೆನ್ನಲೂ ಏನೂ ಅಡ್ಡಿ ಇಲ್ಲ. ಮುಕುಂದಮಾಲಾ ಸ್ತೋತ್ರದಲ್ಲಿ

"ಹೇ ರಾಮಾನುಜ ಹೇ ಜಗತ್ರಯಗುರೋ ! ಹೇ ಪುಂಡರೀಕಾಕ್ಷಮಾಮ್ ಹೇ ಗೋಪೀಜನನಾಥ ಪಾಲಯ" ಎಂದು ರಾಮಾನುಜನೆನ್ನುವ ಹೆಸರಿಂದಲೇ ಶ್ರೀಕೃಷ್ಣ ಪರಮಾತ್ಮನನ್ನು ಕುಲಶೇಖರ ಆಳ್ವಾರರು ಸಂಬೋಧಿಸಿದ್ದಾರೆ. ಶ್ರೀಕೃಷ್ಣನ ಪವಿತ್ರವಾದ ಹೆಸರನ್ನೇ ರಾಮಾನುಜರಿಗೆ ಇಡಲಾಗಿದೆ ಎಂಬ ಸಂಪ್ರದಾಯವೂ ಒಂದುಂಟು. ವೇದಾಂತಾಚಾರ್ಯರು ರಚಿಸಿರುವ ಯತಿರಾಜ ಸಪ್ತತಿಯಲ್ಲಿ "ಶಮಿತೋದಯ ಶಂಕರಾದಿಗರ್ವಃ ಸ್ವಬಲಾದುದ್ಧೃತಯಾದವ ಪ್ರಕಾಶಃ, ಅವರೋಪಿತವಾನ್ ಶ್ರುತೇಃ ಅಪಾರ್ಥಾನ್ನನುರಾಮಾವರಜಃ ಸ ಏವಭೂಯಃ" ಎಂಬ ಶ್ಲೋಕ ಇದಕ್ಕೆ ಆಧಾರವಾಗಿದೆ,

ಶ್ರೀ ಕೃಷ್ಣಪರಮಾತ್ಮನಿಗೂ ಶ್ರೀ ರಾಮಾನುಜರಿಗೂ ಅನೇಕ ವಿಷಯಗಳಲ್ಲಿ ಸಾಮ್ಯವಿದೆ. ಕೃಷ್ಣನಾಗಿ ಅವತರಿಸಿ ಮಾಡಿದ ಕಾರ್ಯಗಳೂ ಶ್ರೀ ರಾಮಾನುಜರು ಮಾಡಿದ ಕಾರ್ಯಗಳೂ ಏಕರೂಪವಾಗಿರುವುದನ್ನು ಸ್ಪಷ್ಟವಾಗಿ ತಿಳಿಯಬಹುದು. ಮೇಲೆ ತಿಳಿಸಿರುವ "ಶಮಿತೋದಯ ಶಂಕರಾದಿಗರ್ವ" ಇತ್ಯಾದಿ ಶ್ಲೋಕರತ್ನದಲ್ಲಿ ಶ್ರೀ ಕೃಷ್ಣನಿಗೂ ಶ್ರೀ ರಾಮಾನುಜರಿಗೂ ಸಾಮ್ಯವನ್ನು ಶ್ಲೇಷೆಯಲ್ಲಿ ನಿರ್ವಹಿಸಿರುತ್ತಾರೆ. ಅದು ಸಂಸ್ಕೃತಭಾಷಾ ಜ್ಞಾನವುಳ್ಳವರಿಗೆ ಚೆನ್ನಾಗಿ ಸ್ಪಷ್ಟವಾಗುತ್ತದೆ.



# "ರಾಜಹಂಸಂ ಭೃಂಗರಾಜಂ-ಯತಿರಾಜಂ ಈಡೇ"

ಶ್ರೀ ಮಣವಾಳ ಮಾಮುನಿಗಳು ಯತಿರಾಜ ವಿಂಶತಿಯ ಎರಡನೆಯ ಶ್ಲೋಕದಲ್ಲಿ ರಾಮಾನುಜರನ್ನು ಹಂಸವಾಗಿಯೂ ಭ್ರಮರವಾಗಿಯೂ ಸ್ತುತಿಸಿರುತ್ತಾರೆ.

"ಶ್ರೀರಂಗರಾಜ ಚರಣಾಂಬುಜ ರಾಜಹಂಸಮ್" ಎಂದೂ "ಶ್ರೀಮತ್ ಪರಾಂಕುಶ ಪದಾಂಬುಜ ಭೃಂಗರಾಜಮ್" ಎಂದೂ ಅಂದರೆ ಶ್ರೀರಂಗನಾಥನ ಚರಣಾರವಿಂದಗಳಲ್ಲಿ ರಾಜಹಂಸರಾಗಿರುವವರು. ನಮ್ಮಾಳ್ವಾರರ ಪಾದಪದ್ಮಗಳಲ್ಲಿ ಶ್ರೇಷ್ಠಭ್ರಮರವಾಗಿ ಇರುವವರು ಎಂದು ಹೇಳಿರುವಂತೆ ಶ್ರೀ ರಾಮಾನುಜರು "ತೆನ್ನತ್ತಿಯೂರರ್ ಕಳಲಿಣೈಕ್ಕೀಳ್ ಪೂಂಡವನ್ಬಾಳನ್" [ರಾಮಾನುಜನೂತ್ತಂದಾದಿ–31] ಎನ್ನುವಂತೆ ವರದರಾಜರ ಚರಣಾರವಿಂದಗಳಲ್ಲಿ ಅತ್ಯಧಿಕ ಪ್ರೇಮಾತಿಶಯವುಳ್ಳವರಾಗಿದ್ದೂ ಶ್ರೀರಂಗನಾಥನಿಂದ ವಿಶೇಷ ಅನುಗ್ರಹವನ್ನು ಪಡೆದು ಶ್ರೀರಂಗಕ್ಕೆ ಹೋಗಿ ಸೇರಿ "ಯಾವಚ್ಛರೀರಪಾತಮ್ ಅತ್ರೈವ ಶ್ರೀರಂಗೇ ಸುಖಮ್ ಆಸ್ವ" [ಈ ಶರೀರವಿರುವವರೆಗೂ ಶ್ರೀರಂಗದಲ್ಲಿಯೇ ಬಾಳಿರಬೇಕು. ಶರಣಾಗತಿಗದ್ಯ–19] ಎಂದು ಭಗವಂತನಿಂದ ಆಜ್ಞೆ ಪಡೆದು ಆ ಪರಮಾತ್ಮನ ಚರಣಾರವಿಂದಗಳನ್ನು ಆಶ್ರಯಿಸಿ ಇದ್ದುದರಿಂದ ಶ್ರೀರಂಗರಾಜ ಚರಣಾಂಬುಜ ರಾಜಹಂಸಮ್ ಎಂದು ಶ್ಲೋಕಪಂಕ್ತಿ ಪ್ರಕಟವಾಯಿತು. ಇನ್ನು ಶ್ರೀಮತ್ ಪರಾಂಕುಶ ಪದಾಂಬುಜಭೃಂಗ ರಾಜಮ್ ಎನ್ನುವ ವಿಶೇಷಣದಿಂದ ಸ್ವಾಮಿ ನಮ್ಮಾಳ್ವಾರರ ಪಾದಪದ್ಮಗಳಲ್ಲಿ ದುಂಬಿಯಂತೆ ನಲಿದಾಡುತ್ತ ಇರುವವರು ಎಂಬುದು ತೋರುತ್ತದೆ.

ಈ ರೀತಿ ಭಗವದ್ರಾಮಾನುಜರನ್ನು ಹಂಸವಾಗಿಯೂ, ಭ್ರಮರವಾಗಿಯೂ ಹೇಳಿರುವುದಕ್ಕೆ ಕೆಲವು ಹಿರಿಮೆಗಳನ್ನು ಸ್ವಾಪದೇಶ ಪ್ರಣಾಳಿಕೆಯಲ್ಲಿ ತಿಳಿಸುತ್ತೇವೆ. ಆಳ್ವಾರುಗಳು ದಿವ್ಯ ಪ್ರಬಂಧದಲ್ಲಿ ಹಂಸಗಳನ್ನು ಭ್ರಮರಗಳನ್ನು ಸಂದೇಶವಾಹಕರನ್ನಾಗಿ ಕಳುಹಿಸಿರುತ್ತಾರೆ. ಅಲ್ಲಿ ರಾಮಾನುಜರಂತಹ ಮಹಾಚಾರ್ಯರನ್ನೇ ಹಂಸವೆಂದೂ, ಭ್ರಮರವೆಂದೂ ಹೇಳುವುದು ಸೂಕ್ತವಾಗಿದೆ. ಹಂಸದ ರೀತಿಯನ್ನು, ಮಧುಪದ ಸ್ವಭಾವವನ್ನೂ ಸ್ವಾಮಿ ರಾಮಾನುಜರಲ್ಲಿ ನಿರೂಪಿಸುವ ರೀತಿಯನ್ನು ನೋಡೋಣ. ಹಂಸಕ್ಕಿರುವ ಹಿರಿಮೆ ಸ್ವಾಮಿ ರಾಮಾನುಜರಲ್ಲಿಯೂ ಅಧಿಕವಾಗಿ ಇದೆ ಹೇಗೆಂದರೆ ; (1) ನೀರನ್ನೂ ಹಾಲನ್ನೂ ಸೇರಿಸಿಟ್ಟರೆ ಅದನ್ನು ಬೇರೆ-ಬೇರೆಯಾಗಿ ಮಾಡಬಲ್ಲದ್ದು ಹಂಸ ಎಂದು ಅನುಭವಗೋಚರ.

"ಹಂಸೋಯಥಾಕ್ಷೀರಮಿವ ಅಂಬುಮಿಶ್ರಮ್" ಎಂಬ ವಚನ ಪ್ರಮಾಣ. ಆದ್ದರಿಂದ ಹಂಸವು ಸಾರಾಸಾರ ವಿವೇಕದಲ್ಲಿ ಸಮರ್ಥವೆಂದು ನಿಶ್ಚಿತವಾಯಿತು. ರಾಮಾನುಜಾಚಾರ್ಯರೂ 'ಅಸಾರಂ ಅಲ್ಪಸಾರಂಚ ಸಾರಂ ಸಾರತರಮ್ ತ್ಯಜೇತ್, ಭಜೇತ್ ಸಾರತಮಮ್ ಶಾಸ್ತ್ರಂ ರತ್ನಾಕರೇ ಇವ ಅಮೃತಂ" ಎನ್ನುವಂತೆ ಸಾರಾಸಾರ ಮಿಶ್ರವಾದ ಶಾಸ್ತ್ರಗಳಲ್ಲಿ ಅಸಾರವಾಗಿ ಉಳ್ಳದ್ದನ್ನು ಬಿಸುಟು ಸಾರಯುತವಾದದ್ದನ್ನೇ ಬಳಸಿದ್ದಾರೆ. ಬಾಹ್ಯ ಕುದೃಷ್ಟಿ ಮತಗಳನ್ನು ನಿರಸನಗೊಳಿಸಿ ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ಉಭಯ ವೇದಾಂತ ಪ್ರವರ್ತನ ಪ್ರವೀಣರಾಗಿ ಇದ್ದು ರಹಸ್ಯಾರ್ಥಗಳ ಮೇಲಿನ ಅರ್ಥದಲ್ಲಿಯೇ ನಿಂತುಬಿಡದೆ ಅಂತರ್ಗತ ಅರ್ಥವನ್ನು ಪ್ರಕಾಶಪಡಿಸಿದರು.

ಅಂತಹ ಅರ್ಥಗಳನ್ನು ಇಲ್ಲಿ ತೋರಿಸಲಾಗುತ್ತದೆ. ತಿರುವಾಯ್ ಮೊಳಿ ವ್ಯಾಖ್ಯಾನದಲ್ಲಿ ಅನೇಕ ಸ್ಥಳಗಳಲ್ಲಿ ಭಗವದ್ರಾಮಾನುಜರ ನಿರ್ವಾಹವೆಂದು ವಿಲಕ್ಷಣವಾದ ಅರ್ಥವನ್ನು ತೋರಿಸಲಾಗಿದೆ. ಅವುಗಳಲ್ಲಿ ಒಂದು :–ಉಯಿರ್

ವರವುಯರ್ನ್ ನಲವನ್'' ಎನ್ನುವ ಮೊದಲ ಪಾಶುರದ ಕೆಳಗೆ 'ತುಯರರು ಶುಡರಡಿ' ಎನ್ನುವ ಸ್ಥಳಕ್ಕೆ 'ಪರಮಾತ್ಮನು ತನ್ನನ್ನು ಸೇರಿದವರೆಲ್ಲರ ದುಃಖಗಳನ್ನು ನಾಶಪಡಿಸುವ ಚರಣಾರವಿಂದ' ಎಂದು ಪೂರ್ವಾಚಾರ್ಯರ ನಿರ್ವಾಹ. ಸ್ವಾಮಿ ರಾಮಾನುಜರು ''ತುಯರರುಕ್ಕುಂ ಶುಡರಡಿ'' ಎಂದು ಭಾವಿಸದೆ ತುಯರರುಪ್ ಶುಡರಡಿ'' ಎಂದು ತೆಗೆದು ಕೊಂಡು ತನಗುಂಟಾದ ದುಃಖವನ್ನು ತಾನೇ ದೂರಗೊಳಿಸಿಕೊಂಡಂತಹ ತಿರುವಡಿ ಎಂಬ ಅರ್ಥವನ್ನು ತಿಳಿಸಿರುವುದಾಗಿ ವ್ಯಾಖ್ಯಾನವಿದೆ. ಪೂರ್ವಾಚಾರ್ಯರು ತಿಳಿಸುವ ಅರ್ಥಕ್ಕಿಂತ ಸ್ವಾಮಿ ರಾಮಾನುಜರು ತಿಳಿಸಿರುವ ಅರ್ಥದಲ್ಲಿ ಏನು ಶ್ರೇಷ್ಠತೆ ? ಎನ್ನುವುದನ್ನು ವಿಮರ್ಶಿಸಿ ತಿಳಿಯಬೇಕು.

ಭಗವಂತನು ಆಶ್ರಿತರು ಪಡುವ ದುಃಖವನ್ನು ಹೋಗಲಾಡಿಸುವವನೆನ್ನುವುದು ಇತಿಹಾಸ ಪುರಾಣಗಳಿಂದ ವ್ಯಕ್ತವಾಗಿ ತಿಳಿದುಬಂದ ಅಂಶ. ಅದನ್ನು ಬಿಡತಕ್ಕದ್ದಲ್ಲ. ರಾಮಾನುಜಾಚಾರ್ಯರು ಅದನ್ನು ಬಿಟ್ಟು ಬೇರೆ ಅರ್ಥವನ್ನು ತಿಳಿಸಿರುವುದು ಆ ಹಿಂದಿನವರ ಅರ್ಥ ಅಸಂಬದ್ಧವೆಂಬ ವಿಚಾರದಿಂದಲ್ಲ ; ಅದಕ್ಕಿಂತಲೂ ಹೆಚ್ಚು ಸ್ವಾರಸ್ಯವಾದದ್ದು. ಹೃದಯವನ್ನು ದ್ರವಿತಗೊಳಿಸುವುದು ಈ ಅರ್ಥವೆಂಬುದೇ ಅವರ ಅಭಿಪ್ರಾಯ. ಆಶ್ರಿತರು ದುಃಖಪಡುವಾಗ ಅದನ್ನು ಕಂಡು ದುಃಖಪಡುವ ಸ್ವಭಾವ ಪರಮಾತ್ಮನದು ಎಂದು ಇತಿಹಾಸಗಳಿಂದ ತಿಳಿದಿರುತ್ತೇವೆ. ದುಃಖಪಡುವುದು ಅವಗುಣವಲ್ಲವೇ ; ಸಮಸ್ತ ಕಲ್ಯಾಣಗುಣಾತ್ಮಕನೂ ಆನಂದಮಯನೂ ಆದ ಭಗವಂತನಲ್ಲಿ ದುಃಖವೆಂಬ ಹೇಯಗುಣಕ್ಕೆ ಎಡೆಯುಂಟೇ ಎಂದು ಶಂಕಿಸುವವರ ಸಂದೇಹವನ್ನು ದೂರಗೊಳಿಸಲೆಂದೇ ವಾಲ್ಮೀಕಿ ಮುನಿಯು ಶ್ರೀ ರಾಮಾಯಣದ ಅಯೋಧ್ಯಾ ಕಾಂಡದಲ್ಲಿ ನಗರದ ಜನಗಳು ಶ್ರೀರಾಮಚಂದ್ರನ ಶ್ರೇಷ್ಠಗುಣಗಳನ್ನು ಪ್ರಶಂಸಿಸಿ ಹೇಳುವುದಕ್ಕೆ ತೊಡಗಿದ ಸಂದರ್ಭದಲ್ಲಿ ''ಬಹವೋನೃಪ ಕಲ್ಯಾಣಗುಣಾಃ ಪುತ್ರಸ್ಯ ಸಂತಿತೇ'' ಎಂದು ಶ್ರೇಷ್ಠಗುಣಗಳನ್ನೇ ತಾವು ದಶರಥ ಚಕ್ರವರ್ತಿ ಹತ್ತಿರ ಎತ್ತಿ ಹೇಳುವುದಾಗಿ ಪ್ರತಿಜ್ಞೆ ಮಾಡಿರುವುದಾಗಿ ಮೊದಲು ತೋರಿಸಿ, ನಂತರ ''ವ್ಯಸನೇಷು ಮನುಷ್ಯಾಣಾಂ ಭೃಶಂಭವತಿ ದುಃಖಿತಃ'' ಎಂದು [ಮನುಷ್ಯನು ದುಃಖಪಟ್ಟಾಗ ಶ್ರೀರಾಮಚಂದ್ರನೂ ಕೂಡ ಹೆಚ್ಚಾಗಿ ದುಃಖಪಡುವನೆಂದು ] ಇದನ್ನು ಒಂದು ಕಲ್ಯಾಣಗುಣವಾಗಿ ಕೊಂಡಾಡಿದರು. ಆಶ್ರಿತರು ಪಡುವ ದುಃಖವನ್ನು ನಾಶಪಡಿಸುವ ಭಗವಂತನು ಎನ್ನುವುದಿರಲಿ, ಆ ಆಶ್ರಿತರ ದುಃಖವು ನೀಗುವವರೆಗೂ ತಾನೂ ದುಃಖಿತನಾಗಿಯೇ ಇದ್ದು ಆಶ್ರಿತರುಗಳ ದುಃಖ ನಿವೃತ್ತಿಯಾದ ನಂತರವೇ ತಾನೂ ದುಃಖವಿಮುಕ್ತನಾಗುವನೆನ್ನುವ ಅರ್ಥ ಭಗವದ್ಗುಣಾನುಭವರಸಿಕರುಗಳ ಹೃದಯವನ್ನು ದ್ರವಗೊಳಿಸುವುದರಿಂದ ಈ ಹಿರಿಮೆಯುಳ್ಳ ಅರ್ಥವನ್ನು ರಾಮಾನುಜರು ತಿಳಿಸಿರುತ್ತಾರೆ.

ಈ ಶ್ರೇಷ್ಠಗುಣವನ್ನು ವಾಲ್ಮೀಕಿ ಮುನಿಯು ರಾಮಾಯಣದ ಅನೇಕ ಸ್ಥಳಗಳಲ್ಲಿ ವಿವರಿಸಿರುತ್ತಾರೆ. ''ಅಭಿಷಿಚ್ಯಚ ಲಂಕಾಯಾಂ ರಾಕ್ಷಸೇಂದ್ರಂ ವಿಭೀಷಣಮ್, ಕೃತಕೃತ್ಯಸ್ತದಾ ರಾಮೋ ವಿಜ್ವರಃ ಪ್ರಮುಮೋದಹ'' [ಸಂಕ್ಷೇಪ ರಾಮಾಯಣ-185] ಎನ್ನುವ ಶ್ಲೋಕದಲ್ಲಿ ವಿಜ್ವರಃ ಎನ್ನುವ ಪದವು ಅಮೋಘವಾದದ್ದು. ವಿಭೀಷಣನ ದುಃಖ ನಿವೃತ್ತಿಮಾಡಿ ಅಭಿಷೇಕ ಮಾಡುವವರೆಗೂ ಶ್ರೀರಾಮಚಂದ್ರನು ಕೊರಗುತ್ತಿದ್ದನೆಂದೂ ಅವನಿಗೆ ಅಭಿಷೇಕ ಮಾಡಿಯೇ ತಾನು ದುಃಖವಿಮುಕ್ತನಾದನಾಗಿಯೂ ಚೆನ್ನಾಗಿ ತಿಳಿದುಬರುತ್ತದೆ. ವಿಜ್ವರಃ ಎನ್ನುವ ಪದದಲ್ಲಿ ಈ ರೀತಿಯಿಂದ ಸಾರವನ್ನು ವಿವೇಕದಿಂದ ಗ್ರಹಿಸಿದುದರಿಂದ ಭಗವದ್ರಾಮಾನುಜರು ಹಂಸವೆನ್ನಿಸಿಕೊಂಡರು.

ಇನ್ನು. ಛಾಂದೋಗ್ಯ ಉಪನಿಷತ್ತಿನಲ್ಲಿ ಜಾನಶ್ರುತಿಯ ಉಪಾಖ್ಯಾನವಿದೆ. ಜಾನಶ್ರುತಿ ಎಂಬ ಕ್ಷತ್ರಿಯನು ಅತುಲೈಶ್ವರ್ಯ ಸಂಪತ್ತು ಉಳ್ಳವನಾದ್ದರಿಂದ ಅನ್ನದಾನ ಮೊದಲಾದುವುಗಳನ್ನು ವಿಶೇಷವಾಗಿ ಮಾಡುತ್ತಿದ್ದನು. ಆದರೆ ಅವನಿಗೆ ಬ್ರಹ್ಮಜ್ಞಾನವೆಂಬುದು ಕಿಂಚಿತ್ತೂ ಇರಲಿಲ್ಲ. ಭಲ್ಲ–ಭಲ್ಲಾಕ್ಷ ಎನ್ನುವ ಇಬ್ಬರು ಮಹರ್ಷಿಗಳು ಅವನ ಕರುಣೆ ಇಟ್ಟು ಇವನಿಗೆ ಬ್ರಹ್ಮಜ್ಞಾನವುಂಟಾಗಬೇಕೆಂದು ಎರಡು ಹಂಸಪಕ್ಷಿಗಳಾಗಿ ಅವನ ಮೇಲೆ ಹಾರಿಕೊಂಡು ಹೋಗ

ವಲ್ಲಿ ಭಲ್ಲನೆನ್ನುವ ಹಂಸ ಭಲ್ಲಾಕ್ಷನೆನ್ನುವ ಹಂಸವನ್ನು ನೋಡಿ "ಜ್ಞಾನಶ್ರುತಿ ಮಹಾಪ್ರಭುವಿನ ಮೇಲೆ ನೆರಳು ಬೀಳದ ಹಾಗೆ ಹೋಗು ಎಂದು ಹೇಳಿತು. ಅದನ್ನು ಕೇಳಿದ ಆ ಹಂಸವು "ಇವನ ಮೇಲೆ ನೆರಳು ಬಿದ್ದರೆ ಏನು ? ಅದರಿಂದ ಏನು ವಿಪತ್ತು ? ಇವರು ರೈಕ್ವರ ಹಾಗೆ ಬ್ರಹ್ಮಜ್ಞಾನಿಯೋ ? ಜ್ಞಾನಹೀನನಾದ ಇವನನ್ನು ನಾವು ಗೌರವಿಸಬೇಕೆ ? ಎಂದು ಅವಹೇಳನ ಮಾಡಿತು. ಅದನ್ನು ಕೇಳಿದ ಜಾನಶ್ರುತಿಯು ದುಃಖದಿಂದ ರೈಕ್ವನನ್ನು ಹುಡುಕಿಕೊಂಡು ಹೋಗಿ ಅವನನ್ನು ಆಶ್ರಯಿಸಿ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂದು ಪ್ರಾರ್ಥಿಸಿ ಅವರಿಂದ ಉಪದೇಶ ಪಡೆದನೆಂಬುದು ಆ ಉಪಾಖ್ಯಾನಸಾರ.

ಈ ಕಥೆಯ ಪ್ರಕಾರ ಬ್ರಹ್ಮಜ್ಞಾನ ಪ್ರಾಪ್ತಿಗೆ ಹಂಸವು ಪ್ರೇರಕವಾದ ಹಾಗೆ ಭಗವದ್ರಾಮಾನುಜರು ತಾವೂ ಅದಕ್ಕೆ ಪ್ರೇರಕರು ಎಂಬುದನ್ನು ಅರಿಯತಕ್ಕದ್ದು.

"ಪಾರುಲಹಿಲ್ ಆರ್ಶೈ ಉಡೈಯೋರ್ಕುೞ ಎಲ್ಲಾಮ್ ಆರಿಯರ್‌ಗಾಳ್ ಕೂರುಮ್ ಎನ್ರು ಪೇಶಿವರಂಬು ಅಱುತ್ತಾರ್ ಪಿನ್".

ಎಂದು ಉಪದೇಶ ರತ್ನಮಾಲೆಯಲ್ಲಿ ಹೇಳಿರುವಂತೆ ಸ್ವಾಮಿಯವರು ಆಜ್ಞೆಯನ್ನು ಮಾಡದಿದ್ದರೆ ಈ ಪ್ರಪಂಚದಲ್ಲಿ ಬ್ರಹ್ಮಜ್ಞಾನ ಪ್ರಚಾರಕ್ಕೆ ತಕ್ಕ ಅಧಿಕಾರ ದುರ್ಲಭವಾಗುತ್ತಿತ್ತು.

ಭಗವಂತನು ವೇದಶಾಸ್ತ್ರಗಳನ್ನು ಪ್ರಕಾಶಪಡಿಸಲು ಮನಸ್ಸಿನಲ್ಲಿ ಇಚ್ಛಿಸಿದಾಗ ಹಂಸರೂಪವನ್ನು ಪರಿಗ್ರಹಿಸಿದನೆಂದು ಶಾಸ್ತ್ರಗಳಿಂದ ತಿಳಿಯುತ್ತೇವೆ. "ಅನ್ನಮಾಯ್ ನೂಲ್ ಪಯಂದಾನ್" ಎಂದೂ "ಅನ್ನಮದಾಯಿರುಂದು ಅಂಗು ಅರನೂಲ್ ಉರೈತ್ತದು" ಎಂದು ಆಳ್ವಾರುಗಳು ತಿಳಿಸಿರುತ್ತಾರೆ. ಶಾಸ್ತ್ರೋಪದೇಶಕ್ಕೆ ಹಂಸಸ್ವಭಾವ ಆವಶ್ಯವಾದುದರಿಂದ ಶಾಸ್ತ್ರಗಳನ್ನು ಉಪದೇಶಿಸಿದವರಲ್ಲಿ ಮುಖಂಡರಾದ ಎಂಬೆರುಮಾನಾರನ್ನು (ರಾಮಾನುಜರನ್ನು) ಹಂಸವೆನ್ನುವುದು ಸೂಕ್ತವಾಗಿದೆ.

ಹಂಸದ ಗುಣವನ್ನು ಹೇಳುವವರು "ನ ಬಧ್ನಾತಿ ರತಿಮ್ ಹಂಸಃ ಕದಾಚಿತ್ ಕರ್ದಮಾಂಭಸಿ' ಎನ್ನುತ್ತಾರೆ. ಹಾಗೆಂದರೆ ಹಂಸವು ಯಾವತ್ತಿಗೂ ಕೆಸರಿನಲ್ಲಿ ಕಾಲು ಇಡುವುದಿಲ್ಲ ಎಂದು. ಹಾಗೆಯೇ ಅಲ್ಲವೇ ಭಗವದ್ರಾಮಾನುಜರ ಗುಣವು. ತಿರುಪ್ಪತ್ತ್ರದ ಕೊನೆಯ ಪಾಶುರದಲ್ಲಿ "ಅಳೇಂದಾರ್ ಪಿರಪ್ಪಾಮ್ ಪೊಲ್ಲಾಅರುವಿನೈ ಮಾಯವನ್ ಶೇರ್‌ತಳ್ಳಲ್ ಪೊಯ್‌ನಿಲತ್ತೇ" ಈ ಸಾಂಸಾರಿಕ ನೆಲವೇ ಕೆಸರಿನಿಂದ ತುಂಬಿದ್ದೆಂದು ಹೇಳಿದೆ. ಇದರಲ್ಲಿ ಕಾಲು ಊರದಿದ್ದವರಲ್ಲಿ ಮುಖ್ಯಸ್ಥರು ಶ್ರೀರಾಮಾನುಜಾಚಾರ್ಯರು ಎಂದು.

ದಿವ್ಯದೇಶಗಳನ್ನು ವರ್ಣಿಸುವ ಸಮಯದಲ್ಲಿ ಆಳ್ವಾರುಗಳು ಹಂಸವು ಸ್ತ್ರೀಯರ ಹೆಜ್ಜೆಯನ್ನು ಅನುಸರಿಸಿ ನಡೆಯುವುದಾಗಿ ಹೇಳುತ್ತಾರೆ. "ಪೆಡೈಯೋಡನ್ನಮ್ ಪೆಯ್ ವಳೈಯಾರ್ತಮ್ ಪಿನ್ ಶೆನ್ರು ನಡೆಯೋಡು ಇಯಲಿ" ಎಂದು ತಿರುಮಂಗೈ ಆಳ್ವಾರರು 'ತಿರುನರೈಯೂರ್ ಪದಿಕ' ವೆನ್ನುವುದರಲ್ಲಿ ಹೇಳಿರುವುದನ್ನು ಕಾಣಬಹುದು.

ಭಗವದ್ರಾಮಾನುಜರೂ ಸಹ ತಾವೂ "ಅನ್ನನಡೈಯ ಅಣಂಗೇ" ಹಂಸಗತಿಯಾದ ಶ್ರೀದೇವಿಯ ಹೆಜ್ಜೆಯನ್ನು ಅನುಸರಿಸುವವರು. ಹೇಗೆಂದರೆ ಲಕ್ಷ್ಮೀದೇವಿಯ ನಡೆಗೆ ಯಾವುದು ನಡತೆ ? ತನ್ನವರನ್ನು ಪರಮಾತ್ಮನ ಹತ್ತಿರ ಕಾಡಿ-ಬೇಡಿ ಚೇತನನಿಗೆ ಪುರುಷಾರ್ಥವನ್ನು ಕೊಡಿಸುವುದೇ ಲಕ್ಷ್ಮೀದೇವಿಯ - ಮುಖ್ಯವಾದ ನಡತೆಯಾಗಿದೆ. ಈ ವಿಷಯವನ್ನು ಶ್ರೀಮತ್ ವೇದಾಂತಾಚಾರ್ಯರು ನ್ಯಾಸತಿಲಕದಲ್ಲಿ "ಉಕ್ತ್ಯಾ ಧನಂಜಯ ವಿಭೀಷಣ ಲಕ್ಷ್ಯಯಾತೇ ಪ್ರತ್ಯಾಯ್ಯ ಲಕ್ಷ್ಮಣ ಮುನೇಃ ಭವತಾ ವಿತೀರ್ಣಂಶ್ರುತ್ವಾವರಮ್"

ಎನ್ನುವ ಶ್ಲೋಕದಿಂದಲೂ, ಮಣವಾಳ ಮಾಮುನಿಗಳು ಯತಿರಾಜ ವಿಂಶತಿಯಲ್ಲಿ – ಕಾಲತ್ರಯೇಪಿ .... ............ ಕ್ಷೇಮಂ ಸ ಏವ ಹಿ ಯತೀಂದ್ರ (ಭವಾಚ್ಛ್ರಿತಾನಾಮ್) ಎನ್ನುವ ಶ್ಲೋಕದಿಂದಲೂ ಪ್ರಕಟಪಡಿಸಿರುತ್ತಾರೆ. ಒಟ್ಟಿನಲ್ಲಿ ಆಚಾರ್ಯರುಗಳ ಪುರುಷಕಾರವಿಲ್ಲದೆ ಭಗವಂತನು ಮೋಕ್ಷವನ್ನು ಕೊಡುವುದಿಲ್ಲವೆನ್ನುವುದು

“ವತ್ಸೇರಂಗೀ ನಿಜಪದಪಿ ಪದವರ್ ದೇಶಿಕಾ ದೇಶಕಾಂಕ್ಷೀ” (ನ್ಯಾಸತಿಲಕ) ಎನ್ನುವ ಶ್ರೀಸೂಕ್ತಿಯಿಂತ ಖಚಿತವಾಗಿದೆ. ಈ ವಿಚಾರ ಭಗವದ್ರಾಮಾನುಜರಿಗೆ ಹೆಚ್ಚು ಅನ್ವಯಿಸುತ್ತದೆ. ಇದೇ ರೀತಿ ಅನೇಕ ವಿಚಾರಗಳನ್ನು ಗ್ರಹಿಸಬಹುದು. “ಶ್ರೀಮತ್ ಪರಾಂಕುಶ ಪದಾಂಬುಜ ಭೃಂಗರಾಜಮ್” ಎಂದು ಭ್ರಮರವೆನ್ನುವುದನ್ನು ಕುರಿತು ನಿರೂಪಣೆ.

ಭ್ರಮರವು ಮಧುವ್ರತವೆಂದು ಪ್ರಸಿದ್ಧಿ ಪಡೆದಿದೆ. ಮಧುವನ್ನು ಬಿಟ್ಟು ಮತ್ತಾವುದನ್ನು ಪಾನಮಾಡು ವುದಿಲ್ಲ. ಅದೇ ಪ್ರಕಾರ “ಉಳಂಕನಿಂದಿರುಕ್ಕುಮ್ ಅಡಿಯವರ್, ತಂಗಳ್ ಉಳ್ಳತ್ತಿಲ್ ಊರಿಯತೇನ್” “ತೇನ್ನೈ ನೆಸಪಾಲೈ ಕನ್ನಲೆಯಮುದೇ” ಎಂದು “ತನಕ್ಕು ತೇನೇ, ಪಾಲೇ ಕನ್ನಲೇಯಮುದೇ” ಎಂದು ಅನೇಕ ಸ್ಥಳದಲ್ಲಿ ಮಧುವನ್ನಾಗಿ ಹೇಳಿರುವ ಭಗವಂತನನ್ನೇ ಅಪೇಕ್ಷಿಸಿ ಮತ್ತಾವುದನ್ನು ಕಣ್ಣೆತ್ತಿಯೂ ನೋಡದೆ ಭಗವದನುಭವವನ್ನೇ ವ್ರತವಾಗಿ ಇಟ್ಟುಕೊಂಡಿದ್ದರು ಶ್ರೀ ರಾಮಾನುಜಾಚಾರ್ಯರು.

“ವಂಡಿನಂಗಳ್ ಕಾಮರಂಗಳಿಶೈ ಪಾಡುಮ್” ಎಂದು ತಿರುಮಂಗೈ ಆಳ್ವಾರರೂ ಹೀಗೆ ಅನೇಕರು ಹೇಳಿರುವಂತೆ ಯಾಳ್ (ವೀಣೆ) ವಾದ್ಯಧ್ವನಿಯಂತೆ ಮಧುರವಾಗಿ ಹಾಡುವುದನ್ನೇ ಸ್ವಭಾವವಾಗಿ ಉಳ್ಳದ್ದು ಭ್ರಮರ. ಸ್ವಾಮಿ ರಾಮಾನುಜರೂ ‘ಯಾಳಿನಿಶೈ ವೇದತ್ತಿಯಲ್’ ‘ಪಣ್ಣಾರ್ ಪಾಡಲಾಯಿರಂ’ ಎನ್ನುವಂತಹ ತಿರುವಾಯ್‌ಮೊಳಿ ಮೊದಲಾದ ದಿವ್ಯ ಪ್ರಬಂಧಗಳ ಗಾನವನ್ನೇ ಹಾಡಿ ಕಾಲಕ್ಷೇಪ ಮಾಡುವಂತಹವರಾಗಿ ಇದ್ದವರು. “ತಮಿಳ್ ಮರೈ ಗಳಾಯಿರಮ್ ಮೊಯಮ್‌ಬಾಲ್ ವಳರ್ತ ಇವತ್ತಾಯ್ ಇರಾಮಾನುಶನ್” “ಪಂಡರುಂ ಮಾರನ್ ಪಶುಂತಮಿಳ್ ಆನಂದಮ್ ಪಾಯ್ಮದುಮಾಯ್ ವಿಂಡಿಡಮೆಂಗಳಿ ರಾಮಾನುಶಮುನಿ ವೇಳಮ್” ಎನ್ನುವುದನ್ನು ಕಾಣಬಹುದು.

ಮಧುಪನೆಂದರೆ (ಚಂಚರೀಕವೆಂದು ಸಂಸ್ಕೃತದಲ್ಲಿ) ಎಲ್ಲೆಲ್ಲೂ ಸಂಚರಿಸುವುದೆಂದು ಪ್ರಸಿದ್ಧಿ ಪಡೆದಿದೆ. ಅದೇ ರೀತಿ ಆಚಾರ್ಯ ರಾಮಾನುಜರೂ “ಶ್ರೀರಂಗಂ ಕರಿಶೈಲ ಮಂಜನ ಗಿರಿಂ ತಾರ್ಕ್ಷ್ಯಾದ್ರಿ, ಸಿಂಹಾಚಲಾ ಶ್ರೀಕೂರ್ಮಂ ಪುರುಷೋತ್ತಮಂಚ ಬದರೀ ನಾರಾಯಣಮ್ ನೈಮಿಶಮ್ ಶ್ರೀಮದ್ದ್ವಾರವತೀ ಪ್ರಯಾಗ ಮಥುರಾಯೋಧ್ಯಾ, ಗಯಾಃ ಪುಷ್ಕರಮ್ ಸಾಲಿಗ್ರಾಮ ಗಿರಿಮ್ ನಿಷೇವ್ಯ ರಮತೇ ರಾಮಾನುಜೋಯಂ ಮುನಿಃ” ಎನ್ನುವಂತೆಯೇ “ಪದಿಯೇ ಪರವಿತ್ತೊಳುಂ ತೊಂಡರ್‌ಗಳಿಲ್ ತಲೈವರಾಯಿರುಂದಾರ್” ಹೀಗೆ ಮುಖ್ಯಸ್ಥರಾಗಿದ್ದರು.

ಭ್ರಮರವು ಯಾವ ಸಮಯದಲ್ಲಿ ಎಲ್ಲಿ ಹೋಗಬೇಕೆಂದು ಇಚ್ಛಿಸಿದರೂ ಅಡ್ಡಿ ಆತಂಕವಿಲ್ಲದೆ ಹೋಗಿ ಆನಂದಿಸುತ್ತದೆ. ದೇವರ ಸಾನ್ನಿಧ್ಯದಲ್ಲಿ, ಗರ್ಭಗೃಹದೊಳಗೆ ಭಗವಂತನ ಚರಣಕಮಲದಲ್ಲಿಯೂ ಸ್ವಚ್ಛಂದವಾಗಿ ತಿರುಗಾಡುವುದನ್ನು ಕಂಡಿರುತ್ತೇವೆ. ಅದೇ ರೀತಿ “ಪಿನ್ನಿಟ್ಟಶಡೈಯಾನುಮ್ ಪಿರಮನುಮ್ ಇಂದಿರನುಂ ಮುನ್ನಿಟ್ಟು ಪುಗಲರಿಯ” ಎನ್ನುವಂತೆ ಪ್ರವೇಶದ್ವಾರಗಳಲ್ಲಿ ಸೇವಾಪರರಾದವರು ತುಂಬಿ ತಲೆ ಹಾಕುವುದಕ್ಕೆ ಆಗದಂತೆ ನಿಬಿಡವಾಗಿದ್ದರೂ “ಮನ್ನಿಯ ತೆನ್ನ ರಂಗಾಪುರಿ ಮಾಮಲೈ ಮಮವುಡು ಮದಿಮನಾಳ್” ಎನ್ನುವಂತೆ ಅವತರಿಸಿರುವ ರಾಮಾನುಜಾಚಾರ್ಯರು ಶ್ರೀರಂಗ ತಿರುಪತಿ, ಕಾಂಚೀಪುರ, ತಿರುನಾರಾಯಣಪುರ ಮೊದಲಾದ ದಿವ್ಯದೇಶಗಳಲ್ಲಿ ತಟ್ಟು ತಡೆ ಆತಂಕ ಇಲ್ಲದೆ ಅಧಿಕಾರ ಹಿರಿಮೆಯೊಂದಿಗೆ ಒಳಹೊಕ್ಕು “ಒಳಿವಿಲ್ ಕಾಲಮೆಲ್ಲಾಮ್ ಉಡನಾಯ್ ಮನ್ನಿ ವಡುವಿಲಾ ವಡಿಮೈಶೈಯದು ವಾಳ್‌ನ್ದವರ್ ಕಾಣ್‌ಮಿನ್”. ತಮ್ಮ ಕಾಲವನ್ನೆಲ್ಲಾ ಕೈಂಕರ್ಯ ತತ್ಪರರಾಗಿಯೇ ಕಳೆದರೆಂಬುದು ಸ್ಪಷ್ಟ.

ಭ್ರಮರವಾದದ್ದು ಗಿಡ-ಬಳ್ಳಿಗಳಲ್ಲಿಯೇ ಸಂಚರಿಸುತ್ತದೆ. ರಾಮಾನುಜರು ತಾವೂ “ಆರಾಮ್ ಶೂಳ್ ವರಂಗಮ್” ಶಿಂದುಪೂ ಮಹಿಳುಂ ತಿರುವೇಂಗಡಮ್ ಎನ್ನುವಂತೆ ಲತಾ-ವೃಕ್ಷಗಳಗಿರುವ ಸ್ಥಳಗಳಲ್ಲಿಯೇ ಸಂಚರಿಸಿದ ವರು. ಈ ರೀತಿ ಅನೇಕ ಸಂದರ್ಭಗಳನ್ನು ಕಾಣಬಹುದು.

॥ ಎಂಬರುಮಾನಾರ್ ತಿರುವಡಿಗಳೇ ಶರಣಂ ॥

# ಶ್ರೀ ಭಗವದ್ರಾಮಾನುಜರ ಶ್ರೀ ಸೂಕ್ತಿ ಶೈಲಿ

ಶ್ರೀ ರಾಮಾನುಜಾಚಾರ್ಯರ ಶ್ರೀಸೂಕ್ತಿಯು ಶೈಲಿಯು ಕೂರತ್ತಾಳ್ವಾನ್, ಪರಾಶರಭಟ್ಟರು ಮೊದಲಾದವರ ಹಾಗೆ ಇಲ್ಲದೆ ಗಹನವಾಗಿ ಇದೆ. ಸುವ್ಯಕ್ತವಾಗಿಯೇ ಏಕೆ ನಿರೂಪಿಸಬಾರದು ಎಂದು ಒಂದು ಪ್ರಶ್ನೆ.

ಈ ಸಂದೇಹ ಯುಕ್ತವಾದದ್ದೇ. ಇದು ಕೆಲವರಿಗೆ ಮಾತ್ರವಲ್ಲ ; ಅನೇಕರಿಗೆ ಉಂಟಾಗತಕ್ಕದ್ದೇ. ಶ್ರೀಭಾಷ್ಯ ಪ್ರವಚನ ಪ್ರವೀಣರುಗಳಾದ ಮಹಾಮತಿಗಳೂ ಸಹ ಹೀಗೆಯೇ ಎಣಿಸುತ್ತಾರೆ. ಭಗವದ್ರಾಮಾನುಜರಿಗೆ ಅತ್ಯಾದರಣೀಯವಾದ 'ಆಳವಂದಾರ್' ಮಾತಾಪಿತಾ ಶ್ಲೋಕವನ್ನು ರಚಿಸಿರುತ್ತಾರೆ. ಆಳ್ವಾನ್ ಭಟ್ಟರು ಆಳ್ವಾರನ್ನು ಕುರಿತು ಅಪರಿಮಿತವಾಗಿ ವರ್ಣಿಸಿರುತ್ತಾರೆ. ಹಾಗೆ ಭಾಷ್ಯಕಾರರೂ ಏಕೆ ಹೇಳಿರಬಾರದು ? ಒಬ್ಬೊಬ್ಬರ ಉಕ್ತಿಶೈಲಿ ಒಂದೊಂದು ರೀತಿ ; ಆಳವಂದಾರವರೂ "ವಕುಳಾಭಿರಾಮಂ" ಎನ್ನುವ ಒಂದು ವಿಶೇಷೋಕ್ತಿಯಿಂದ ಪ್ರಕಟಪಡಿಸಿದರೇ ಹೊರತು ಬೇರೆ ಇಲ್ಲ. ಅವರ ಉಕ್ತಿಚಾತುರ್ಯ. ಇವರು 'ಪಂಚಾಚಾರ್ಯ ಪದಾಶ್ರಿತರು', ಎನ್ನುವುದು ಸುಪ್ರಸಿದ್ಧ. ಆ ಐದು ಆಚಾರ್ಯರುಗಳ ಶುಭನಾಮಗಳನ್ನು ವೇದಾಂತಾಚಾರ್ಯರು ಎತ್ತಿ ತೋರಿಸುವುದರಿಂದ ಸ್ವಾಮಿ ರಾಮಾನುಜರು ಯಾವ ವಿಧವಾದ ಸ್ತುತಿಗಳನ್ನು ರಚಿಸಿರುವರೆಂದು ನೋಡಬೇಕು. ಆ ಆಚಾರ್ಯರುಗಳಿಗೆ ಆ ದಿನ ಮೊದಲುಗೊಂಡು ಪ್ರಚಾರದಲ್ಲಿರುವ ತನಿಯನ್‌ಗಳು ರಾಮಾನುಜರು ರಚಿಸಿದ್ದಲ್ಲವೆಂದು ಕೆಲವರು ಹೇಳುವುದುಂಟು. ಅದು ವಿವಾದಗ್ರಸ್ತವೆಂದೇ ಬಿಟ್ಟುಬಿಡೋಣ. ಆಳವಂದಾರ್‌ಗೆ ತನಿಯನ್ನಾಗಿ— "ಯತ್ಪದಾಂಭೋರುಹೇತ್ಯಾದಿ ಶ್ಲೋಕ ಭಗವದ್ರಾಮಾನುಜರು ರಚಿಸಿದರೆನ್ನುವುದು ನಿರ್ವಿವಾದ.

ಇದು ಗೀತಾ ಭಾಷ್ಯದಲ್ಲಿಯೇ ಸೇರಿರುವುದರಿಂದ ಸ್ವಾಮಿಯವರ ಸೂಕ್ತಿಯೆನ್ನುವುದರಲ್ಲಿ ವಿವಾದ ಲವಲೇಶವೂ ಇಲ್ಲ. ಈ ಶ್ಲೋಕ ಅಳವಡಿಸಿರುವ ಸೊಬಗನ್ನು ಪರಿಶೀಲಿಸಿದರೆ ಆಚಾರ್ಯರ ಉಕ್ತಿಸರಣಿ ಲೋಕವಿಲಕ್ಷಣವಾದುವೆನ್ನುವುದನ್ನು ಅಲ್ಪಜ್ಞರೂ ಸ್ಪಷ್ಟಪಡಿಸುವರೆನ್ನುವುದು ಸತ್ಯ. ಆ ಶ್ಲೋಕಕ್ಕೆ ಹಿರಿಯರು ಪರಂಪರೆಯಾಗಿ ಉಪದೇಶಿಸಿ ಬರುವ ಅರ್ಥ ವಿಶೇಷಗಳನ್ನು ಆಸ್ತಿಕರಿಗೆ ತಿಳಿಸುತ್ತೇವೆ.

"ಯತ್ಪದಾಂಭೋರುಹಧ್ಯಾನ ವಿಧ್ವಸ್ತಾಶೇಷಕಲ್ಮಷಃ, ವಸ್ತುತಾಮುಪ ಯಾತೋಽಹಮ್ ಯಾಮುನೇಯಮ್ ನಮಾಮಿ ತಮ್" ಇದು ಆಳವಂದಾರ್‌ರವರ ಎರಡು ಚರಣಾರವಿಂದಗಳನ್ನು ಮಾತ್ರ ಧ್ಯಾನಿಸುವುದೆಂದಲ್ಲ "ಯತ್ಪದಾಂಬೋರುಹ" ಪದದಿಂದ ಹದಿನಾಲ್ಕು ಪಾದಗಳನ್ನು ಉದ್ದೇಶಿಸಿ ಹೇಳುತ್ತಾರೆ. (ಯತ್ಪದಾಂಬೋರುಹ) ಎನ್ನುವ ಆರು ಅಕ್ಷರಗಳಿಗೆ ವರ್ಣಕ್ರಮ ಹೇಳಿದರೆ ಹದಿನಾಲ್ಕು ಅಕ್ಷರ ಆಗುತ್ತದೆ. ಯಕಾರ, ಅಕಾರ, ತಕಾರ, ಪಕಾರ, ಅಕಾರ, ದಕಾರ, ಆಕಾರ, ಮಕಾರ, ಭಕಾರ, ಓಕಾರ, ರೇಫ, ಉಕಾರ ಹಕಾರ, ಅಕಾರ—ಎಂದಾಯಿತು ವರ್ಣಕ್ರಮ ಹೇಳುವ ಮಾರ್ಗ. ಈ ರೀತಿ ಸರಿಹೊಂದುವ ಹದಿನಾಲ್ಕು ಅಕ್ಷರಗಳೂ ಹದಿನಾಲ್ಕು ಪಾದಗಳನ್ನು ತಿಳಿಸುತ್ತವೆ. ಅವು ಯಾವುದೆಂದರೆ, ಆಳವಂದಾರ್‌ರವರ ಎರಡು ಚರಣಗಳು ತಿಳಿದದ್ದೇ ಆಗಿದೆ. ಆ ಆಳವಂದಾರ್‌ರು ತಮಗೆ ಪರಮ ನಿಧಿಯೆನ್ನಿಸಿಕೊಂಡ [ಶ್ರೀಮತ್ತದಂಘ್ರಿಯುಗಳಂ ಪ್ರಣಮಾಮಿ ಮೂರ್ಧ್ನಾ ಎನ್ನುವ] ನಮ್ಮಾಳ್ವಾರ್‌ರವರ ಎರಡು ಪದ

ಕಮಲಗಳು. ಆಗ ನಾಲ್ಕು. ಆ ಆಳವಂದಾರ್ರ ಪಾದಪದ್ಮಗಳನ್ನೇ ಆಶ್ರಯಿಸಿದ್ದ ಸ್ವಾಮಿರಾಮಾನುಜರಿಗೆ ಆಚಾರ್ಯರುಗಳಾದ ಪಂಚಾಚಾರ್ಯರ ಚರಣಾರವಿಂದಗಳು ಹತ್ತು. ಹೀಗೆ ಹದಿನಾಲ್ಕು ಪಾದಗಳನ್ನು ಸ್ಮರಿಸಿ ಈ ಶ್ಲೋಕ ವಿವರಿಸಿದೆ.

ಯಸ್ಯ ಪದಾಂಭೋರುಹೇ – ಯತ್ಪದಾಂಭೋರುಹೇ ಎಂದು ಸಮಾಸ. (ಸಂಬಂಧ ಸಾಮಾನ್ಯೇಷಷ್ಠೀ ಎಂದು ತಿಳಿಯಬೇಕು) ಆಳವಂದಾರ್ರವರ ಮುಖಮಂಡಲದಲ್ಲಿರುವ ಪಾದಾರವಿಂದಗಳನ್ನು ಹೇಳಿದಂತೆ. ಪುನಃ ಯಸ್ಯ ಪದಾಂಭೋರುಹೇ. ಎಂದರೆ ಆಳವಂದಾರ್ರು ತಾವು 'ಮಾತಾಪಿತಾ ಯುವತಯಃ' ಎನ್ನುವ ಶ್ಲೋಕದಲ್ಲಿ "ಆದ್ಯಸ್ಯನಃ ಕುಲಪತೇಃ ವಕುಳಾಭಿರಾಮಮ್ ಶ್ರೀಮತ್ತದಂಘ್ರಿಯುಗಳಮ್ ಪ್ರಣಮಾಮಿ ಮೂರ್ಧ್ನಾ" ಎಂದು ತಮ್ಮ ಶಿರೋಭೂಷಣರಾದ ನಮ್ಮಾಳ್ವಾರ್ರ ಉಭಯ ಪಾದಗಳೂ ಯತ್ಪದಾಂಭೋರುಹ ಶಬ್ದದಿಂದಲೇ ಸುಲಭವಾಗಿ ತಿಳಿಸಿದೆ. ಈಗ ಷಷ್ಠಿಗೆ ಅರ್ಥ.

ಪರಿಗ್ರಾಹ್ಯ ಪರಿಗ್ರಾಹಕ ಭಾವರೂಪವಾದ ಸಂಬಂಧ–ಷಷ್ಠಿ "ಯಸ್ಯ ಪದಾಂಭೋರುಹಾಣಿ ಯತ್ಪದಾಂಭೋರುಹಾಣಿ" ಎಂದು ತೆಗೆದುಕೊಳ್ಳಬಹುದು. ಪ್ರಪಂಚದಲ್ಲಿ ಶಿಷ್ಯರುಗಳನ್ನು ತಮ್ಮ ಚರಣವೆಂದೇ ಸಂಪ್ರದಾಯಜ್ಞರು ಹೇಳುವುದರಿಂದ ಆಳವಂದಾರ್ರವರ ಐದು ಶಿಷ್ಯರುಗಳನ್ನೇ ಆಳವಂದಾರ್ರವರ ತಿರುವಡಿಗಳೆಂದು ಹೇಳಿದಹಾಗೆ 'ಪದಾಂಭೋರುಹ' ಎನ್ನುವುದರಲ್ಲಿ ಎರಡು ಪದಗಳು ಇರುವುದಿಲ್ಲವೇ? (ಪದ ಎಂದೂ, ಅಂಭೋರುಹ ಎಂದೂ, ಪಾದಗಳಿಗೆ ವಾಚಕವಾದ ಶಬ್ದಗಳಿಂದ ಅವರುಗಳ ಚರಣಗಳನ್ನು ತೆಗೆದುಕೊಳ್ಳಬೇಕೆಂದು ಹೇಳಬಹುದು.

ಅಂಭೋರುಹವೆಂದು ಚರಣಗಳನ್ನು ಹೇಳುವದೆಂದರೆ. 'ತಾಮರೈಯಂಕೊಂಡ ತಡವರ್ ತಾನ್ಗಳ್' (ತಿರುವಾಯ್ ಮೊಳಿ 6–9–1) ಎನ್ನುವ ಆಳ್ವಾರರ ಪ್ರಯೋಗವನ್ನು ತಿಳಿದವರು ಇದರಲ್ಲಿ ವಿಪ್ರತಿಪತ್ತಿ ಮಾಡಲಾರರು. 'ತಾಮರೈಯಂಕೊಂಡ ತಡಂ ತಾಳಿಣೆ,' ಎನ್ನುವ ಸ್ಥಳದಲ್ಲಿ ಚರಣಗಳಿಗೆ ಪರ್ಯಾಯವಾಗಿ ತಾವರೆಯನ್ನೇ ಹೇಳಿರುವುದನ್ನು ಕಾಣಬೇಕು. ಈ ಅನುಸರಣೆ ಸಂಸ್ಕೃತದಲ್ಲಿಯೂ ಉಂಟು. ಅಪಹ್ನುತಿ ಅಲಂಕಾರವೆನ್ನುತ್ತಾರೆ. ರೂಪಕಾತಿಶಯೋಕ್ತಿಯೂ ಆಗುತ್ತದೆ. "ಪಶ್ಯ ನೀಲೋತ್ಪಲದ್ವಂದ್ವಾತ್ ನಿಸ್ಸರಂತಿ ಶಿತಾಃ ಶರಾಃ" ಆದ್ದರಿಂದ ಪರಮಾಚಾರ್ಯರಾದ ನಮ್ಮಾಳ್ವಾರ್ರನ್ನು ಪ್ರಾಚಾರ್ಯರಾದ ಆಳವಂದಾರನ್ನು ಸ್ವ ಆಚಾರ್ಯರುಗಳಾದ ಐದು ಜನರನ್ನು ಪ್ರಕಾಶಯೇತ್ ಶಿಷ್ಯಃ" ಎಂದು ಹೇಳದೆ "ಗುರುಮ್ ಪ್ರಕಾಶಯೇತ್ ಧೀಮಾನ್" ಎಂದು ಮೂಲ ಪ್ರಮಾಣದಲ್ಲಿ ಇರುವುದರಿಂದ ಮಹಾಮೇಧಾವಿಗಳು ಯಾವ ವಿಧವಾಗಿ ಆಚಾರ್ಯ ಪ್ರಕಾಶನ ಮಾಡಬಹುದೋ ಆ ರೀತಿಯಾಗಿಯೇ ಸ್ವಾಮಿ ರಾಮಾನುಜರೂ ತಮ್ಮ ಮೇಧಾವೈಭವವನ್ನು ಪ್ರಕಾಶಿಸಲು ಈ ರೀತಿ ಶ್ಲೋಕರತ್ನವನ್ನು ಅಳವಡಿಸಿರುವುದು. ಅತ್ಯದ್ಭುತವಾದ ಸಾಮ್ರಾಜ್ಯವು ಹೀಗಲ್ಲವೇ ಇರುವುದು.

ಈ ರೀತಿ ಪರಿಶ್ರಮದಿಂದ ತಿಳಿದುಕೊಳ್ಳುವ ಹಾಗೆ ಏಕೆ ಶ್ಲೋಕವನ್ನು ರಚಿಸಬೇಕು? ಎಲ್ಲರೂ ಸುಸ್ಪಷ್ಟವಾಗಿಯೇ ಚೆನ್ನಾಗಿ ತಿಳಿದುಕೊಳ್ಳುವಂತೆ ರಚಿಸಬಾರದೋ ಎನ್ನುವವರು ಯಾವಜ್ಜೀವ ಹಾಗೆಯೇ ಹೇಳಿಕೊಂಡಿರಲಿ. ಯತ್ಪದಾಂಭೋರುಹೇತ್ಯಾದಿಯಾದ ಮೇಲೆ ಹೇಳಿರುವ ತನಿಯನ್ನಿನಲ್ಲಿ ಸಂತ್ರೋಂದು ವಿಶೇಷವನ್ನು ಅನ್ವೇಷಣೆ ಮಾಡಿ ಜ್ಞಾನಪೂರ್ವಕವಾಗಿ ತಿಳಿದುಕೊಳ್ಳಬೇಕು. ಅದು ಯಾವುದೆಂದರೆ– [ಪದಾಂಭೋರುಹ] ಎಂದು ಐದು ಅಕ್ಷರಗಳನ್ನು ಬರೆದು ಆಳವಂದಾರ್ರವರ ತಿರುವಡಿಗಳನ್ನು ನಿರ್ದೇಶಿಸಿರುವುದು ಆಳವಂದಾರ್ರವರ ಐದು ಪಾದಗಳು [ಅವು ಯಾವುವೆಂದರೆ ಐದು ಶಿಷ್ಯರುಗಳು] ತಮ್ಮ ಧ್ಯಾನಕ್ಕೆ ಒಳಪಟ್ಟಿರುವರೆಂದೂ ತಿಳಿಸಲ್ಪಟ್ಟಿರುತ್ತೆ.

ಅದರಲ್ಲಿ ಮೊದಲೇ ಪಕಾರವನ್ನು ಹೇಳಿರುವುದು. ಈ ಐದು ಆಚಾರ್ಯರುಗಳಲ್ಲಿ ಹಿರಿಯ ಆಚಾರ್ಯರೇ ತಮಗೆ ಶ್ರೇಷ್ಠರಾದ ಆಚಾರ್ಯರಾಗಿ ದೊರೆತರೆನ್ನುವುದಕ್ಕೆ ಸೂಚಕವಾಗಿರುತ್ತೆ. ಹೇಗೆ ಎಂದರೆ; ಸ್ವಾಮಿ ರಾಮಾನು

ಜರಿಗೆ ಹಿರಿಯ ಆಚಾರ್ಯರು "ಪೆರಿಯ ನಂಬಿ" ಅವರ ನಿಜನಾಮಧೇಯ 'ಪರಾಂಕುಶ ದಾಸರು' ಎಂದು ವಾಕ್ಯ ಗುರು ಪರಂಪರೆಯಲ್ಲಿ 'ಶ್ರೀಮತೇ ರಾಮಾನುಜಾಯ ನಮಃ'. ಶ್ರೀಮದ್ಯಾಮುನ ಮುನಯೇ ನಮಃ' ಎನ್ನುವ ವಾಕ್ಯಗಳ ಮಧ್ಯದಲ್ಲಿ 'ಶ್ರೀ ಪರಾಂಕುಶದಾಸಾಯ ನಮಃ' ಎಂದಿರುವುದನ್ನು ತೆಗೆದುಕೊಂಡರೂ ಪೆರಿಯ ನಂಬಿಗಳ ಹೆಸರು ಪರಾಂಕುಶರೆನ್ನುವುದೇ ಎಂದು ತಿಳಿಯಬಹುದು. ಪದಾಂಭೋರುಹ ಎನ್ನುವುದರಲ್ಲಿ ಪಕಾರ ಪರಾಂಕುಶದಾಸರಾಗಿ ಇರುವ ತಮ್ಮ ಮೊದಲನೆಯ ಆಚಾರ್ಯರನ್ನು ಪ್ರತ್ಯಭಿಜ್ಞಾಪನ ಮಾಡುವುದೆಂಬುದನ್ನು ನೋಡಬೇಕು. ಇದರ ನಂತರವೂ ಒಂದನ್ನು ಕೇಳಬಹುದು. ಮೊದಲಕ್ಷರದಿಂದ ಪೆರಿಯನಂಬಿ ಸೂಚಿತರಾಗುವ ಹಾಗೆಯೇ, ಇತರ ನಾಲ್ಕು ಅಕ್ಷರಗಳಲ್ಲಿಯೂ ನಾಲ್ಕು ಆಚಾರ್ಯರುಗಳು ಸೂಚಿತರುಗಳನ್ನಾಗಿ ತೋರಿಸಬೇಡವೆ ? ಎಂದು. ಕೇಳಿ ; ಹಿರಿಯ ಆಚಾರ್ಯರನ್ನು ತೋರಿಸುವುದೇ ಸಮರ್ಪಕ. ಒಬ್ಬೊಬ್ಬ ಆಚಾರ್ಯರನ್ನು ತೋರಿಸಬೇಕೆಂದು ನಿರ್ಬಂಧವಲ್ಲ. ಮಹಾ ವಿವೇಕಿಗಳಾದ ಚತುರರುಗಳು ಆಳವಾಗಿ ನೋಡಿದ್ದೇ ಆದರೆ ಆ ಮಾರ್ಗವೂ ಕಂಡುಬರುವುದು.

ಅದನ್ನೂ ಮತ್ತೊಂದು ಸ್ಥಳದಲ್ಲಿ ನಾವೇ ತೋರಿಸುತ್ತೇವೆ.*

---

*ಈ ಹದಿನಾಲ್ಕು ಸಂಖ್ಯೆಗೆ ಪೂರಕಕ್ರಮ ಇನ್ನೊಂದು ವಿಧವಾಗಿದೆ. ಎಂದು ಮೇಲ್ನಾಡಿನ ನಿರ್ವಾಹವನ್ನು ಇಲ್ಲಿ ಗಮನಿಸುವುದು ಅನುಚಿತವಾಗಲಾರದು. ಆದ್ದರಿಂದ ಈ ಉಪಪಾದನ ಪ್ರಕ್ರಿಯೆಯಿಂದ ಶ್ರೀ ಭಾಷ್ಯಕಾರರು ಅತ್ಯಧಿಕ ಹಿರಿಯ ವಿಷಯವನ್ನು ಸಹ ಸಾಧಾರಣವಾಗಿಯೆ ರಚಿಸುವರೆಂಬುದನ್ನು ವಿವೇಕಿಗಳಾದವರು ನಿರ್ಣಯಿಸುತ್ತಾರೆ.

ತಿರುಮಾಲೈ ಆಂಡಾನ್‌ರವರ ಚರಣಾರವಿಂದಗಳಲ್ಲಿ ತಿರುವಾಯ್‌ಮೊಳಿಯ ಅರ್ಥವನ್ನು ಕೇಳುತ್ತಿರುವಲ್ಲಿ 'ದ್ರೋಣಾಚಾರ್ಯರಿಗೆ ಏಕಲವ್ಯನ ಹಾಗೆ ಆಳವಂದಾರ್‌ರವರಿಗೆ ನಾನು' ಎಂದು ಹೇಳಿರುವುದಾಗಿ ಚರಿತ್ರಗ್ರಂಥಗಳಲ್ಲಿ ಪ್ರಸಿದ್ಧಿ ಇದೆ. ಇದನ್ನು ಶ್ರೀ ವೇದಾಂತಾಚಾರ್ಯರು ಹಾಗೆಯೇ ಸಂಸ್ಕೃತದಲ್ಲಿ ಹೇಳಿರುತ್ತಾರೆ. "ದ್ರೋಣಾಚಾರ್ಯಸ್ಯ ಏಕಲವ್ಯ ಇವ ಯಾಮುನಾಚಾರ್ಯಸ್ಯ ಅಹಮಿತ್ಯಭಿಪ್ರಾಯೇಣ" ಎಂದು "ಯತ್ಪದಾಂಭೋರುಹ" ಎನ್ನುವ ಶ್ಲೋಕ ವ್ಯಾಖ್ಯಾನದಲ್ಲಿ ಹೇಳಿರುತ್ತಾರೆ. ಆಳ್‌ವಾರ್ ತಿರುವಡಿಗಳನ್ನು ಧ್ಯಾನಿಸಿ ಸತ್ತೆ ಬ್ರಹ್ಮಜ್ಞಾನ ಪಡೆದದ್ದಾಗಿ ಹೇಳಿಕೊಳ್ಳುವ ರಾಮಾನುಜಾಚಾರ್ಯರು ಆಳ್‌ವಾರ್‌ರವರ ಚರಣಾರವಿಂದಗಳಲ್ಲಿಯೂ ಅವರ ದಿವ್ಯ ಸೂಕ್ತಿಗಳಲ್ಲಿಯೂ ಆಳವಂದಾರ್‌ರಿಗಿಂತ ಅತಿಶಯ ಪ್ರಾವಣ್ಯವುಳ್ಳವರೆನ್ನುವುದು ನಿರ್ವಿವಾದ.

---

ವಿಷ್ಣು. ಶ್ರೀ. ಪೃತನಾಪತಿ (ವಿಷ್ವಕ್ಸೇನ) ಶಠರಿಪು. ಮಧುರಕವಿ. ಶ್ರೀನಾಥ ಪದ್ಮೇಕ್ಷಣ. ರಾಮ. ಯಾಮುನ ಮತ್ತು ಪಂಚಾಚಾರ್ಯರಾದ ಪರಾಂಕುಶದಾಸ. ಮಾಲಾಧರ. ಗೋಷ್ಠೀಪೂರ್ಣ. ಶ್ರೀ ಶೈಲಪೂರ್ಣ. ರಂಗಾಧಿಪರು. ಇದರಲ್ಲಿ ಜಾತ್ಯೇಕವಚನವನ್ನು ಅಂಗೀಕರಿಸಿದರೆ 14 ಅಕ್ಷರಗಳ ಹದಿನಾಲ್ಕು ಪಾದಗಳಾಗುತ್ತವೆ. ಈ ಕ್ರಮದಲ್ಲಿ ಪರಮಾತ್ಮನು ಮೊದಲುಗೊಂಡು ಆಚಾರ್ಯಪರಂಪರೆಯಲ್ಲಿ ಪ್ರತಿ ವ್ಯಕ್ತಿಯ ಗ್ರಹಣವೂ ಇದೆ. ಮೇಲೆ ಹೇಳಿರುವುದರಲ್ಲಿ ವಿಷ್ಣು, ಶ್ರೀ ಸೇನಾನಾಥ ನಾಥಮುನಿ, ಉಯ್ಯಕ್ಕೊಂಡಾರ್, ಮಣಕ್ಕಾಲ್ ನಂಬಿ ಮತ್ತು ನಾಥಮುನಿಗಳಿಗೆ ಪೂರ್ವ ಸಬ್ರಹ್ಮಚಾರಿಯಾದ ಮಧುರಕವಿ ಆಳ್ವಾರ್‌ರು ಹೊರಬೀಳುತ್ತಾರೆ.]

10. ಇಲ್ಲಿ ಭಗವದ್ರಾಮಾನುಜರು ಸಿದ್ಧಾಂತ ಅರ್ಥವಾಗಿ ಮನಸ್ಸಿಗೆ ತೆಗೆದುಕೊಂಡ ಅರ್ಥವಿಶೇಷಗಳು ಆಳ್ವಾರ್‌ಗಳ ಮನಸ್ಸಿನಲ್ಲಿದ್ದದ್ದೇ ಎನ್ನುವ ಕಾರಣದಿಂದಲೇ ವಿಶೇಷ ಬಹುಮಾನಕ್ಕೆ ಪಾತ್ರವಾಯಿತೆನ್ನುವುದನ್ನು ಕೆಲವು ವಿಲಕ್ಷಣ ಭಾಗ್ಯಶಾಲಿಗಳೇ ತಿಳಿಯಬಲ್ಲರು. ಆಳ್ವಾರುಗಳು ಅಂಗೀಕರಿಸಿದ ಅರ್ಥವೆಂದೇ ಸ್ವಾಮಿ ರಾಮಾನುಜರೂ ಒಪ್ಪಿರುವುದು. ಅದರ ವಿವರಣೆ ಕೆಳಕಂಡಂತಿದೆ.

11. ಕಪ್ಯಾಸವಮ್ ಎಂಬ ಛಾಂದೋಗ್ಯೋಪನಿಷತ್ತಿನಲ್ಲಿರುವ ವಿಲಕ್ಷಣವಾದ ನುಡಿಗೆ ಮೂರುವಿಧವಾದ ವ್ಯುತ್ಪತ್ತಿಯನ್ನು ತೆಗೆದುಕೊಂಡು ಮೂರು ಅರ್ಥವು ಪ್ರಕಟವಾಯಿತು. ಆ ಅರ್ಥವಿಶೇಷಗಳನ್ನು ತೋರಿಸುವ ರಾಮಾನುಜರ ಶ್ರೀ ಸೂಕ್ತಿಯಾವುದು– "ಗಂಭೀರಾಂಬ ಸಮುದ್ಭೂತ – ಸಮ್ಮೃಷ್ಟನಾಳ್ – ರವಿಕರ ವಿಕಸಿತ – ಪುಂಡರೀಕ ದಳಾಮಲಾಯತೇಕ್ಷಣಃ" ಎನ್ನುವುದು. ಆಳವಾದ ಶೀತಲ ಜಲದಲ್ಲಿ ಬಾಳುವುದೂ ನಾಳವೆನ್ನುವ ದಂಟಿನೊಂದಿಗೆ ಸೇರಿರುವುದೂ, ಸೂರ್ಯಕಿರಣಗಳಿಂದ ವಿಕಸಿತವಾಗುವ ಪುಂಡರೀಕ ದಳದ ಹಾಗೆ ವಿಶಾಲವಾದ ನೇತ್ರಯುಗ್ಮವುಳ್ಳವನೆಂದು. ಕಪ್ಯಾಸ ಎನ್ನುವ ಈ ಚಿಕ್ಕಪದಕ್ಕೆ ಇಷ್ಟು ಅರ್ಥಗಳು ಹೇಗೆ ಉಂಟಾಗುತ್ತವೆ ಎನ್ನುವ ಸಂದೇಹ ಉಂಟಾಗುತ್ತೆ. ಆ ಸಂದೇಹವನ್ನು ದೂರಗೊಳಿಸಲು ಕಪ್ಯಾಸ ಎನ್ನುವುದಕ್ಕೆ ಮಾಡುವ ವ್ಯುತ್ಪತ್ತಿಗಳನ್ನು ವಿವರಿಸಬೇಕಾಗಿದೆ. ಅದು ಕಠಿಣವಾದ ಸಂಸ್ಕೃತಶಾಸ್ತ್ರ ಪ್ರಕ್ರಿಯೆಯಾಗಿ ಇರುವುದರಿಂದ ಸಂಸ್ಕೃತದಲ್ಲಿ ಬರೆದಿರುವ ಗ್ರಂಥದಲ್ಲಿ ವಿವರಿಸಲಾಗಿದೆ. ಶ್ರೀ ಭಗವದ್ರಾಮಾನುಜರು ಹೇಳಿರುವ ಮೂರು ಅರ್ಥಗಳೂ ಕಪ್ಯಾಸ ಎನ್ನುವ ಶಬ್ದ ಸನ್ನಿವೇಶದಲ್ಲಿ ದೊರೆತದ್ದೇ ಎನ್ನುವುದನ್ನು ಭಗವದ್ರಾಮಾನುಜರ ಭಕ್ತರುಗಳು ದೃಢವಾಗಿ ತಿಳಿದಿರುತ್ತಾರೆ.

12. ಇಲ್ಲಿ ಮುಖ್ಯವಾಗಿ ಜಿಜ್ಞಾಸುಗಳಾದ ವೇದಾಂತಿಗಳು ವಿಮರ್ಶಿಸಬೇಕಾದುದು ಏನೆಂದರೆ, ರಾಮಾನುಜರು ಈ ಅರ್ಥಗಳನ್ನು ತಿಳಿಸುವುದಕ್ಕೆ ಏನಾದರೂ ವಿಶಿಷ್ಟ ಕಾರಣವಿದೆಯೋ ಎನ್ನುವುದೇ. ಕಪ್ಯಾಸ ಎನ್ನುವ ನುಡಿಗೆ ರಾಮಾನುಜಾಚಾರ್ಯರು ತಿಳಿಸಿರುವ ಅರ್ಥಕ್ಕೆ ಮೂಲ ತೋರಿಸಬೇಕಾದರೆ ಸಂಸ್ಕೃತ ಶಾಸ್ತ್ರಗಳಲ್ಲಿ ಮೂಲವಾಗಿ ತೋರಿಸುವಂತಹುದು ಯಾವುದೂ ಇಲ್ಲ ಎಂದು ದೃಢವಾಗಿ ಹೇಳಬಹುದು. ಸ್ವಾಮಿ ಭಾಷ್ಯಕಾರರು ಅನುಗ್ರಹಿಸುವ ಅರ್ಥವೆಲ್ಲಾ ಆಳ್ವಾರ್ ಪಾಶುರಗಳನ್ನೇ ಮೂಲವಾಗಿ ಮನಸ್ಸಿಗೆ ತೆಗೆದುಕೊಂಡಿರುವುದೆನ್ನುವುದು ನಮ್ಮ ಪೂರ್ವಾಚಾರ್ಯರುಗಳ ಸಿದ್ಧಾಂತ. ಆ ತಳಹದಿಯಲ್ಲಿ ಇದ್ದುಕೊಂಡು ಮಹಾವಿದ್ವಾಂಸರಾದ ಪ್ರತಿವಾದಿ ಭಯಂಕರ ಅಣ್ಣಂಗರಾಚಾರ್ಯಸ್ವಾಮಿಯವರು ಶ್ರೀ ಭಾಷ್ಯಾದಿಗಳಿಂದ ಅನೇಕ ವಿಷಯಗಳನ್ನು ತೆಗೆದು ನಿರೂಪಿಸಿರುತ್ತಾರೆ. ಅಂತಹ ನಿರೂಪಣೆಯಲ್ಲಿ ಇದು ಸರ್ವಶ್ರೇಷ್ಠವಾದ ನಿರೂಪಣೆ.

13. ಗಂಭೀರಾಂಭ ಸ್ಸಮುದ್ಭೂತವಾಗಿಯೂ ಸುಮೃಷ್ಟನಾಳವಾಗಿಯೂ. ರವಿಕರ ವಿಕಸಿತವಾಗಿಯೂ ಇರುವ ಕಮಲ ಪುಷ್ಪವನ್ನು ಭಗವಂತನ ದಿವ್ಯನೇತ್ರಗಳಿಗೆ ಉಪಮಾನವಾಗಿ ಹೇಳುವುದು ಹೊಂದುವುದೆಂದು ಭಗವದ್ರಾಮಾನುಜರ ಹೃದಯದಲ್ಲಿ ತೋರಿದ್ದು ದಿವ್ಯಪ್ರಬಂಧಗಳಲ್ಲಿ ಅವರು ಅತ್ಯಧಿಕ ಅವಗಾಹನೆಯುಳ್ಳದ್ದರಿಂದಲೇ ಎಂದು ಖಚಿತವಾಯಿತು. ಆಳ್ವಾರುಗಳು ಭಗವಂತನ ನಯನಾರವಿಂದದ ಸೊಬಗನ್ನು ಕುರಿತು ಹೇಳುವ ಸ್ಥಳಗಳಲ್ಲಿ ಮೇಲೆ ತಿಳಿಸಿರುವ ಮೂರು ವಿಶೇಷಗಳನ್ನು ಅದ್ಭುತವಾಗಿ ಹೇಳಿರುತ್ತಾರೆ. ಅದನ್ನು ಕುರಿತು ವಿವರಣೆ.

14. "ಗಂಭೀರಾಂಭ ಸ್ಸಮುದ್ಭೂತ ಪುಂಡರೀಕ" ಜಲಜವೆಂದೂ, ಅಂಬುಜವೆಂದೂ, ಅಂಭೋಜವೆಂದೂ, ನೀರಜವೆಂದೂ ಹೆಸರು ಪಡೆದ ಪುಂಡರೀಕವಾದುದು ನೀರಿಂದಿಲ್ಲದೆ ಹುಟ್ಟುವುದರಿಂದಲೂ ಉತ್ಪನ್ನವಾಗುವ ಪ್ರಸಕ್ತಿ ಇಲ್ಲ. ಅಂಭ ಸ್ಸಮುದ್ಭೂತ ಎನ್ನುವುದರ ಅರ್ಥ ನೀರನ್ನು ಬಿಟ್ಟು ಅಗಲದಿರುವಿಕೆಯನ್ನು ಹೇಳುವುದೇ ಆಗಿದೆ.

“ತಾವರೆಯನ್ನು ವಿಕಾಸಗೊಳಿಸುವವನಾದ ಸೂರ್ಯನಿಂದಲೇ ನೀರಿನಿಂದ ಹೊರಬಂದ ಕಮಲ ಪುಷ್ಪವನ್ನು ಬಾಡಿಸುವಂತೆ” ಎನ್ನುವ ಶ್ರೀವಚನ ಭೂಷಣ ಶ್ರೀಸೂಕ್ತಿಯಂತೆ ಕಮಲಂ ಜಲಾತ್ ಭೇದಂ ಶೋಷಯತಿ ರವಿರ್ನ ಪೋಷಯತಿ ಎನ್ನುವ ಪ್ರಮಾಣವೂ ಇಲ್ಲಿ ಅನುಸಂಧೇಯಂ. ನೀರನ್ನು ಬಿಟ್ಟು ಅಗಲದಿರುವ ತಾವರೆಯಂತೆ ದಿವ್ಯ ನೇತ್ರಗಳುಳ್ಳವನು ಎನ್ನುವುದಾಯಿತು. 'ನೀರಾರ್‌ಕಮಲಂ ಪೋಲ್ ಶಂಗಣ್‌ಮಾಲ್ ಎನ್ನೊರುವನ್' ಎನ್ನುವ ಶಿರಿಯ ತಿರುಮಡಲ್ ಪಾಶುರವೇ ಆಧಾರ. ಅಲರ್ ತಾವರ್ರೈ ಕಣ್ಣನ್ ಎನ್ನುವ ತಿರುವಿರುತ್ತ ಪಾಶುರದಲ್ಲಿ ಆಳ್ವಾರುಗಳ ಮನಸ್ಸು ಸ್ಮರಿಸುವ ಅರ್ಥ ಇದೇ ಎಂದು ಭಗವದ್ರಾಮಾನುಜರಿಂದ ಆದರಿಸಲ್ಪಟ್ಟಿತು. 'ನೀರಾರ್ ಕಮಲಂಪೋಲ್' ಎನ್ನುವ ಸ್ಥಳದಲ್ಲಿ 'ನೀರಾರ್' ಎನ್ನುವ ವಿಶೇಷಣವನ್ನು ಯಾವ ಸಂತೋಷಕ್ಕಾಗಿಯೂ ಇಟ್ಟಿದ್ದಲ್ಲ. ಅಭಿರಅಲರ್ ತಾಮರ್ರೈಕಣ್ಣನ್ ಎನ್ನುವ ಸ್ಥಳದಲ್ಲಿ ನಂಬಿಳ್ಳೈ ಈಡಿನಲ್ಲಿ ಕಪ್ಯಾಸಶ್ರುತಿ ಸ್ಪಷ್ಟವಾಗಿಯೇ ಉದಾಹರಿಸಿದೆ. ಆ ಸ್ಥಳದಲ್ಲಿ ಈ ರೀತಿ ಶ್ಲೋಕ ಉದಾಹರಿಸಿದೆ. 'ಅಬಿರಲರ್ ತಾಮರ್ರೈಕಣ್ಣನ' ಕೆಸರಿನಲ್ಲಿ ನಿಂತು ಅರಳಿದ ತಾವರೆ ಹೂವಿನಂತೆ ದಿವ್ಯನೇತ್ರಗಳುಳ್ಳವನು 'ಯಥಾಕಪ್ಯಾಸವ್ ಪುಂಡರೀಕಮೇವಮಕ್ಷಿಣೀ' ಎನ್ನುವಂತೆ ಇಲ್ಲಿ ವಾದಿಕೇಸರಿಯವರ ಸ್ವಾಪದೆ ಶಾರ್ಥ ಕೆಳಕಂಡಂತೆ. ಅಭಿರು ಎನ್ನುವ ಪದ ಪ್ರಾಚೀನ ಪದ, ನೀರಿನಲ್ಲೂ ಕೆಸರಿನಲ್ಲೂ ನಿಂತು ಅರಳಿ ಪರಿವರ್ತನೆ ಹೊಂದದ ನೇತ್ರ, ಕಮಲಪುಷ್ಪದಂತೆ ನೇತ್ರಯುಗ್ಮಯುಳ್ಳವನು.

15. ಆದ್ದರಿಂದ “ನೀರಾರ್ ಕಮಲಮ್ ಪೋಲ್ ಶೆಂಗಣ ಮಾಲ್ ಎನ್ನೊರುವನ್” ಎನ್ನುವ ಶಿರಿಯ ತಿರುಮಡಲ್ ಪಾಶುರವನ್ನು 'ತಣ್‌ಪೆರುನೀರ್‌ತಡಂ ತಾಮರ್ರೈ ಮಲರ್ನ್ದಾಲೊಕ್ಕುಂ ಕಣ್ ಪೆರುಂ ಕಣ್ಣನ್' ಎನ್ನುವ ತಿರುವಾಯ್‌ಮೊಳಿ ಪಾಶುರವನ್ನು ಮನಸ್ಸಿನಲ್ಲಿ ನೆನಸಿಕೊಂಡೇ 'ಗಂಭೀರಾಂಭಂ ಸ್ಸಮುದ್ಭೂತ' ಎನ್ನುವ ವಿಶೇಷಣವನ್ನು ರಾಮಾನುಜಾಚಾರ್ಯರು ತಿಳಿಸಿದರೆನ್ನುವುದು ನಿರ್ದಿಷ್ಟವಾಯಿತು

16. 'ಅಭಿರಲರ್ ತಾಮರ್ರೈ ಕ್ಕಣ್ಣನ್' ಎನ್ನುವ ತಿರುವೃತ್ತ ಪಾಶುರದಲ್ಲಿ ಜಲವಾಚಕವಾದ ಶಬ್ದವಿಲ್ಲದೇ ಇರುವುದರಿಂದ ಈ ಪಾಶುರವು 'ಗಂಭೀರಾಂಭ ಸ್ಸಮುದ್ಭೂತ' ಎನ್ನುವುದಕ್ಕೇ ಪ್ರಮಾಣವಾಗಲಾರದೆಂದು ಕೆಲವರಿಗೆ ಸಂದೇಹವುಂಟಾಗುತ್ತೆ. ಇದಕ್ಕೆ ಉತ್ತರ– ತಾವರೆಯಾದದ್ದು ಕೇವಲ ತಣ್ಣೀರಿನಲ್ಲಿ ಇರಲಾರದು. ಕೆಸರಿನಲ್ಲಿಯೇ ಉತ್ಪತ್ತಿಯಾಗುತ್ತದೆ. ಇದು ಪ್ರತ್ಯಕ್ಷಸಿದ್ಧವಾದ್ದರಿಂದ ಇದರಲ್ಲಿ ವಿವಾದ ಪ್ರಸಕ್ತಿಯೇ ಇಲ್ಲ. 'ಗಂಭೀರಾಂಭಸ್ಸಮುದ್ಭೂತ' ಎಂದು ಹೇಳಿರುವ ಸ್ವಾಮಿ ರಾಮಾನುಜರಿಗೆ. ಮೊಟ್ಟಮೊದಲು ಪ್ರಕಟಪಡಿಸಿರುವ ದ್ರಮಿಡಾಚಾರ್ಯರಿಗೂ ಜಲವಾಚಕವಾದ ಶಬ್ದದಲ್ಲಿ ಔಚಿತ್ಯ ಕೆಸರೇ ಎಂದುಕೊಳ್ಳುವುದರಲ್ಲಿ ತಥ್ಯವಿಲ್ಲ. ಮೃತ್ತಿಕಾ ಮಿಶ್ರವಾದ ನೀರಿಗೆ ತಾನೇ ಕೆಸರೆಂದು ಹೆಸರು. ಬರಿಯ ಮಣ್ಣನ್ನು ಪಂಕವೆಂದೋ ಅಥವಾ ಕೆಸರೆಂದೋ ಹೇಳುವುದಿಲ್ಲವಲ್ಲವೇ ? ಕಮಲ ಪುಷ್ಪ ಪ್ರಸ್ತಾಪ ಬರುವ ಸ್ಥಳಗಳಲ್ಲಿ 'ಪಂಕಕರ್ದಮ ಜಂಭಾಲಾದಿ' ಎನ್ನುವ ಪದಗಳು ಮತ್ತು ಜಲವಾಚಕಪದಗಳೂ ಪರ್ಯಾಯವಾಗಿಯೇ ತೆಗೆದುಕೊಳ್ಳಬೇಕು. ಇದು ವಾದಿಕೇಸರಿಯವರ ವ್ಯಾಖ್ಯಾನದಲ್ಲಿ ಸೂಚಿತವಾಗಿದೆ.

ನಂಬಿಳ್ಳೆಯವರ ಈಡಿನಲ್ಲಿ 'ಅಭಿರಲರ್ ತಾಮರ್ರೈ' ಎನ್ನುವುದನ್ನೇ ಕುರಿತು ಕಪ್ಯಾಸ ಶ್ರುತಿ ಸ್ಪಷ್ಟವಾಗಿ ಉದಾಹರಿಸುವುದರಿಂದ ಅದನ್ನು ನೋಡದೆ

17. 'ಸುಪ್ರವೃದ್ಧನಾಳ ಪುಂಡರೀಕ' ನೀರನ್ನು ಬಿಟ್ಟು ಅಗಲಿದ ಕಮಲಕ್ಕೆ ಸೌಂದರ್ಯವಿಲ್ಲದ ಹಾಗೆಯೇ ನಾಳವನ್ನು ಬಿಟ್ಟು ಇರುವ ತಾವರೆಗೂ ಸೌಂದರ್ಯವಿಲ್ಲ. ನಾಳವನ್ನು ಬಿಟ್ಟು ಇರುವ ತಾವರೆಗೂ ಸೌಂದರ್ಯವಿಲ್ಲದುದರಿಂದ ನಾಳದೊಡನಿರುವುದೂ ಅವಶ್ಯಕವೆಂದು ವ್ಯಕ್ತವಾಗುತ್ತದೆ. ಇದೂ ಸಹ ಆಳ್ವಾರ್ ಪಾಶುರಗಳಲ್ಲಿ ಪ್ರಕಟವಾಗುತ್ತೆ ತಿರುವಿರುತ್ತದಲ್ಲಿ 'ವನ್‌ಕಾತ್ತರೈಯ' ಎನ್ನುವ ಹಾಡಿನಲ್ಲಿ 'ಎಂಬಿರಾನ್ ತಡಂಕಣಗಳ್ ಮೇಕಾಲ್ ಕಮಲ ತ್ತಡವ್

ಪೋಲ್ ಪೊಲಿಂದನ' ಎಂದು ಹಾಡಿರುತ್ತಾರೆ. ಕಮಲಕ್ಕೆ ಹೇಳಿರುವ 'ಪೊನ್‌ಕಾಲ್'' ಎನ್ನುವ ವಿಶೇಷಕ್ಕೆ ಮೃದುವಾದ ನಾಳವುಳ್ಳದ್ದಾಗಿರುವ ಎಂದು ಅರ್ಥ. ನಾಳ ಯಾವುದು ದಂಟು, ಕಮಲಕ್ಕೆ ಅದು ಕಾಲಿನ ಹಾಗೆ ಇರುವುದರಿಂದ ಕಾಲ್ ಎನ್ನುವ ನುಡಿಯಿಂದ ಹೇಳಲಾಯಿತು. ನಾಳವನ್ನುವ ವಸ್ತುವನ್ನೇ ಪೂರ್ವಾಚಾರ್ಯರುಗಳು ಅರ್ಥಮಾಡಿರುತ್ತಾರೆ. ಆಗ ಈ ದಿವ್ಯಸೂಕ್ತಿಗೆ ಸೇರಿದ ಹಾಗೆ ಸುಪುಷ್ಪನಾಳ ಎಂದು ಹೇಳಿದೆ.

18 'ರವಿಕರವಿಕಸಿತ ಪುಂಡರೀಕ' ತಾವರೆಯು ನೀರಿನಲ್ಲಿದ್ದು ನಾಳದೊಂದಿಗೆ ಇದ್ದರೂ ಸೂರ್ಯಕಿರಣಗಳಿಂದ ವಿಕಸಿಸಲ್ಪಟ್ಟ ಸ್ಥಿತಿಯಲ್ಲಿ ಮಾತ್ರ ಭಗವಂತನ ನೇತ್ರಯುಗ್ಮಗಳಿಗೆ ಹೋಲಿಕೆಯಾಗುವುದರಿಂದ ಈ ವಿಶೇಷಣವೂ ಅವಶ್ಯಕವಾಯಿತು. ಇದು ಆಳ್ವಾರರುಗಳ ಪಾಶುರದಲ್ಲಿದೆ. ಈ ಭಾವವನ್ನು ಹಣೆಯಲ್ಲಿ ಧರಿಸುವ ಊರ್ಧ್ವ ಪುಂಡ್ರರೇಖೆಯು ಪುಷ್ಟೀಕರಿಸುತ್ತದೆ. ತಿರುವಾಯ್‌ಮೊಳಿಯಲ್ಲಿ (5–4 9) 'ಶೆಂಜುಡರ್ ತಾಮರೈ ಶೆಲ್ವನ್'' ಎನ್ನುವ ಪಾಶುರ ಇಲ್ಲಿ ತೆಗೆದುಕೊಳ್ಳಬೇಕು ಈ ಸ್ಥಳದ (ಈಡಿನಲ್ಲಿ) ವ್ಯಾಖ್ಯಾನದಲ್ಲಿ ಕಪ್ಯಾಸ ಶ್ರುತಿಯನ್ನು ಉದಹರಿಸಿರುತ್ತಾರೆ ಇಲ್ಲಿ 'ಶೆಂಜುಡರ್ ತಾಮರೈ' ಎನ್ನುವುದಕ್ಕೆ ಕೆಂಬಣ್ಣದಿಂದ ಕೂಡಿರುವ ತಾವರೆ ಕೆಂದಾವರೆ ಎಂದು ಅರ್ಥವಾಗುತ್ತೆ. ಆ ಕೆಂಬಣ್ಣ ಎನ್ನುವುದು ಎಲ್ಲಿಂದ ಬಂದಿತೆಂದರೆ, ಅದಕ್ಕೆ ಮೊದಲು 'ಅಂಶುಡರ್ ವೆಯ್ಯೋನ್'' ಎಂದು ಸೂರ್ಯನನ್ನು ಪ್ರಸ್ತಾಪಿಸಿರುವುದರಿಂದ ಅದರ ಅಧೀನವೆಂದು ಕಾಣಲ್ಪಡುತ್ತದೆ. ಆದ್ದರಿಂದ ಪ್ರಕಾಶವುಳ್ಳದ್ದಾಗಿ ಕೆಂಬಣ್ಣದ್ದಾಗಿ ಇರುವ ತಾವರೆಯ ಹೂವಿನಂತಹ ಕಣ್ಣುಗಳುಳ್ಳವನು ಎಂದಾಯಿತು. ಈ ಶ್ರೀ ಸೂಕ್ತಿಯನ್ನು ಮನಸ್ಸಿನಲ್ಲಿ ನೆನೆಸಿಯೇ 'ರವಿಕರ ವಿಕಸಿತ ಪುಂಡರೀಕ' ಎಂದು ಹೇಳಿರುತ್ತಾರೆ.

"ಶೆಂದಣ್ ಕಮಲಕ್ಕಣ್ .... .............. .... ಶಿವಂದವಾಯೋರ್ ಕರುನಾಯಿರು ಅಂದಮಿಲ್ಲಾ ಕದಿರ್ ಪರಪ್ಪಿ ಅಲರ್ನ್ದ್ ತೊಕ್ಕುಮಮ್ಮಾನೇ" ಎನ್ನುವ ತಿರುವಾಯ್‌ಮೊಳಿ ಪಾಶುರವು ಇಲ್ಲಿ ಸೇರತಕ್ಕದ್ದು. "ಶೆಂಗಮಲಮ್ ಅಂತರಂಶೇರ್ ವೆಂಗತಿಶೋರ್ ಕಲ್ಲಾಲ್ ಅಲರಾವಾಲ್'' ಎನ್ನುವ ಪೆರುಮಾಳ್ ತಿರುಮೊಳಿ ಪಾಶುರವೂ ಇಲ್ಲಿ ನೆನೆಸತಕ್ಕದ್ದು. ಆದರೆ ಈ ಪಾಶುರದಲ್ಲಿ ದಿವ್ಯ ನೇತ್ರಗಳ ಪ್ರಸ್ತಾಪವಿಲ್ಲದುದರಿಂದ ಅದು ಪರಿಪೂರ್ಣವಾಗಲಾರದು. ಈ ರೀತಿ ಆಳ್ವಾರುಗಳ ಪಾಶುರಗಳಲ್ಲಿ ಚೆನ್ನಾಗಿ ಪರಿಶ್ರಮವಿದ್ದುದರಿಂದಲೇ ಸ್ವಾಮಿ ರಾಮಾನುಜಾಚಾರ್ಯರು "ಕಪ್ಯಾಸ ಶ್ರುತಿಯನ್ನು ಪರಮಭೋಗ್ಯವಾಗಿ ನಿರ್ವಹಿಸಿರುವರೆಂದು ನಿರ್ಣಯಿಸಲಾಯಿತು.

# "ಭಗವದ್ ಭಾಷ್ಯಕಾರರು ಮತ್ತು ದಿವ್ಯಪ್ರಬಂಧ"

1. ಆಳ್ವಾರುಗಳು ಅನುಗ್ರಹಿಸಿರುವ ದಿವ್ಯಪ್ರಬಂಧಗಳನ್ನೆಲ್ಲಾ ಪ್ರಪಂಚದಲ್ಲಿ ಕಾಣಸಿಗದೆ ಮರೆಯಾಗಿದ್ದ ಕಾಲದಲ್ಲಿ ಶ್ರೀಮನ್ನಾಥ ಮುನಿಗಳು ಬಹಳ ಪರಿಶ್ರಮಪಟ್ಟು ಶ್ರೀ ನಮ್ಮಾಳ್ವಾರನ್ನು ಯೋಗದೆಶೆಯಲ್ಲಿ ಸಾಕ್ಷಾತ್ಕರಿಸಿ ದಿವ್ಯ ಪ್ರಬಂಧಗಳನ್ನೆಲ್ಲಾ ಪಡೆದು ವಿಶೇಷವಾಗಿ ಪ್ರಚಾರ ಮಾಡಿದ್ದಾಗಿ ಇತಿಹಾಸವಿದೆ. ಇದು ಯಾರ ಕಲ್ಪನೆಯಿಂದಲೂ ಬರೆದು ಇಟ್ಟಿರುವುದಾಗಿ ಹೇಳಲು ಅವಕಾಶವಿಲ್ಲದ ಹಾಗೆ ಶ್ರೀ ವೇದಾಂತಾಚಾರ್ಯರೇ ಮೊದಲಾದವರೂ ಸಹ ಸಂಪ್ರದಾಯ ಪರಿಶುದ್ಧಿ, ಗುರುಪರಂಪರಾಸಾರ ಮೊದಲಾದ ರಹಸ್ಯ ಗ್ರಂಥಗಳಲ್ಲಿ ಬರೆದು ಇಟ್ಟಿರುತ್ತಾರೆ. ಸಂಪ್ರದಾಯ ಪರಿಶುದ್ಧಿ ವಾಕ್ಯಗಳು ಈ ರೀತಿ ಇವೆ– "ವೇದಾಂತ ಸಂಪ್ರದಾಯಕ್ಕೆ ಈ ಯುಗಾರಂಭದಲ್ಲಿ ಬ್ರಹ್ಮನಂದಿ ಮುಂತಾದವರು ಅನಂತರ ನಮ್ಮಾಳ್ವಾರು ಪ್ರವರ್ತಕರಾದರು. "ಪ್ರಾಪ್ಯಂ ಜ್ಞಾನಂ ಬ್ರಾಹ್ಮಣಾತ್ ಕ್ಷತ್ರಿಯಾದ್ವಾ ವೈಶ್ಯಾಚ್ಛೂದ್ರಾದ್ವಾಪಿ ನೀಚಾದ ಭೀಕ್ಷ್ಣಮ್" ಮೊದಲಾದ ಪ್ರಮಾಣ ಬಲದಿಂದ– "ಮಿಕ್ಕವೇದಿಯರ್ ವೇದತ್ತಿನುಳ್ಪೊರುಳ್ ನಿರ್ಕಪ್ಪಾಡಿಯೆನ್ನೆಂಜುಳ್ ನಿರುತ್ತಿನಾನ್" ಎನ್ನುವುದು ಹೊಂದುತ್ತದೆ. ವೇದಾಂತಾರ್ಥ ವೈಶದ್ಯ ಹೇತುವಾದ್ದರಿಂದ ಭಾಷಾಂತರ ರೂಪ ದೋಷ್ಯ ಎಂದು.

2. ಗುರುಪರಂಪರಾನುಸಾರ ಶ್ರೀಸೂಕ್ತಿಗಳು ಈ ರೀತಿ ಇವೆ. ಸರ್ವಲೋಕಕ್ಕೂ ಪರಮಾಚಾರ್ಯನಾದ ಪರಮೇಶ್ವರನು ಪರಾಂಕುಶ ಪರಕಾಲಾದಿ ತಿರುಮಂಗೈ ಆಳ್ವಾರ್ ರೂಪಗಳಲ್ಲಿ ಅಭಿನವವಾಗಿ ಬಂದು ದಶಾವತಾರವನ್ನು ಮಾಡಿ ಮೇಘಗಳು ಸಮುದ್ರದ ನೀರನ್ನು ತೆಗೆದುಕೊಂಡು ಸರ್ವೋಪಜೀವ್ಯವಾದ ತಣ್ಣೀರಾಗಿ ವರ್ಷಿಸುವಂತೆ ವೇದಾಂತಗಳಲ್ಲಿ ಬೇಕಾದ ಸಾರತಮಾಂಶವನ್ನು ಸರ್ವರಿಗೂ ಸ್ಪಷ್ಟವಾಗುವ ಭಾಷೆಯಲ್ಲಿ ಸಂಗ್ರಹಿಸಿ ತೋರಿಸಿಯೂ ಇನ್ನೂ ಅವರಲ್ಲಿಯೇ "ಭಗವದ್ರಾಮಾನುಜರು ತಿರುಕೋಟ್ಟಿಯೂರ್ ನಂಬಿಯವರ ಹತ್ತಿರ ರಹಸ್ಯಾರ್ಥಗಳನ್ನು ಕಲಿತು; ತಿರುಮಾಲೈ ಆಂಡಾನ್ ಹತ್ತಿರ ತಿರುವಾಯ್ಮೊಳಿಗೆ ಅರ್ಥವನ್ನು ಕೇಳಿದರು. ಆಳವಂದಾರ್, ಆಳ್ವಾರ್ ಶ್ರೀಪಾದದಲ್ಲಿ ತಿರುವಾಯ್ಮೊಳಿಯನ್ನು ಪಠಿಸಿ ಸ್ತೋತ್ರಾದಿಗಳು ತಿಳುಹಿಸುವ ಸಿರಿನುಡಿಗಳನ್ನು ಕೇಳಿದರು ಇತ್ಯಾದಿ. ಇಲ್ಲಿ ಉದಾಹರಿಸಲ್ಪಟ್ಟ ಶ್ರೀ ಸೂಕ್ತಿಗಳು ವೇದಾಂತಾಚಾರ್ಯರದ್ದು. ಆದ್ದರಿಂದ ನಮ್ಮ ಸಂಪ್ರದಾಯ ಬಹಿರ್ಭೂತರುಗಳಾದ ಇತರರು ಹೇಗೆ ಹೇಳಿದರೂ ಶ್ರೀ ವೈಷ್ಣವ ಸಂಪ್ರದಾಯಸ್ಥರುಗಳು ಇದರಲ್ಲಿ ಅತಿಶಂಕಿಪಡಲು ಲವಲೇಶವೂ ಅವಕಾಶವೇ ಇಲ್ಲ. "ದಿವ್ಯ ಪ್ರಬಂಧಗಳನ್ನು ಅಭಿವೃದ್ಧಿಗೆ ತಂದವರು ಶ್ರೀ ಭಗವದ್ರಾಮಾನುಜರು ಎಂದು ಅನಾದಿಯಾಗಿ ಪ್ರಬಲ ಪ್ರಸಿದ್ಧಿ ಬಂದಿರುತ್ತೆ. ರಾಮಾನುಜರಿಗೆ ಮಂಗಳಾ ಶಾಸನವನ್ನು ಹೇಳಿರುವವರು ಮಣವಾಳ ಮಾಮುನಿಗಳು. ಆರ್ತಿ ಪ್ರಬಂಧದಲ್ಲಿ ಆ ವಿಚಾರವಿದೆ. ಅದರಲ್ಲಿ "ಮಾರನುರೈಶೈಯ್ದ ತಮಿಳ್ ಮರೈವಳರ್ತ್ತೋನ್ ವಾಳಿಯೇ" ಎಂದು ಇದೆ. ಈ ವಿಷಯವನ್ನು ಶ್ರೀ ರಾಮಾನುಜಾಚಾರ್ಯರ ಸಮಕಾಲದವರಾದ ಮಹಾಚಾರ್ಯರುಗಳ ಶ್ರೀಸೂಕ್ತಿಯಿಂದಲೂ ಸ್ಥಿರಪಡುತ್ತದೆ. ಇಲ್ಲಿ ಅನೇಕರಿಗಿರುವ ಹಲವು ಬಗೆಯ ಸಂದೇಹಗಳನ್ನು ಜಗದಾಚಾರ್ಯರಾದ ಶ್ರೀ ಪ್ರತಿವಾದಿ ಭಯಂಕರಂ ಉ. ವೇ. ಅಣ್ಣಂಗರಾಚಾರ್ಯ ಸ್ವಾಮಿಯವರು ನಿವಾರಣೆ ಮಾಡಿರುತ್ತಾರೆ.

3. ಆಳ್ವಾರುಗಳು ರಚಿಸಿರುವ ಸಕಲ ದಿವ್ಯ ಪ್ರಬಂಧಗಳಿಗೂ ತನಿಯನ್ (ಪ್ರಾರಂಭಿಕ ಸ್ತುತಿ) ಗಳು ಅನಾದಿಕಾಲವಾಗಿಯೇ ಅನುಸಂಧಾನ ಮಾಡುತ್ತಾ ಇದ್ದಾರೆ. ಕೆಲವು ಪ್ರಬಂಧಕ್ಕೆ ಒಂದೆರಡು ತನಿಯನ್ನು, ಮತ್ತೆ ಕೆಲವು

ಪ್ರಬಂಧಕ್ಕೆ ೬–೭ ತನಿಯನ್ನುಗಳೂ ರಚಿಸಿರುತ್ತಾರೆ. ನಮ್ಮಾಳ್ವಾರು ರಚಿಸಿರುವ ಸಹಸ್ರಗಾಥಾ ತಿರುವಾಯ್ಮೊಳಿ ದಿವ್ಯ ಪ್ರಬಂಧಕ್ಕೆ ಸಂಸ್ಕೃತ ತನಿಯನ್ ಒಂದು, ತಮಿಳ್ ತನಿಯನ್ ೫. ಒಟ್ಟು ಆರು ತನಿಯನ್‌ಗಳನ್ನು ಎಲ್ಲಾ ಸ್ಥಳಗಳಲ್ಲಿಯೂ ಅನುಸಂಧಿಸುತ್ತಿದ್ದಾರೆ. "ಮಾರನ್ ಪಣಿತ್ತ ತಮಿಳ್ ಮರೈಕ್ಕು, ಆರಂಗಕೂರ ಅವತರಿತ್ತ ತಿರುಮಂಗೈ ಆಳ್ವಾರು ರಚಿಸಿರುವ "ಪೆರಿಯ ತಿರುಮೊಳಿ" ಸಹಸ್ರಕ್ಕೆ ಸಂಸ್ಕೃತ ತನಿಯನ್ ಒಂದು, ತಮಿಳ್ ತನಿಯನ್ ಮೂರು, ಒಟ್ಟು ನಾಲ್ಕು ತನಿಯನ್‌ಗಳನ್ನು ಹೇಳುತ್ತಾರೆ. ಹೆಚ್ಚಾಗಿ ತನಿಯನ್‌ನಲ್ಲಿ ಆ ದಿವ್ಯ ಪ್ರಬಂಧಗಳ ಹಿರಿಮೆ ಗ್ರಂಥಕರ್ತರ ಪ್ರಭಾವ ಸೂಚಿಸಿರುತ್ತೆ. ತಿರುವಾಯ್ಮೊಳಿ ತನಿಯನ್ನಿನಲ್ಲಿ ಒಂದನ್ನೂ ಪೆರಿಯ ತಿರುಮೊಳಿ ತನಿಯನ್ ಒಂದು ಅತ್ಯಂತ ವೈಲಕ್ಷಣ್ಯ ಪೂರ್ಣವಾಗಿ ಇದೆ.

4. ತಿರುವಾಯ್ಮೊಳಿ ತನಿಯನ್ನಿನಲ್ಲಿ –

"ಮಿಕ್ಕ ಇರೈನಿಲೈಯುಂ ಮೆಯ್ಯಾಮುಯಿರ್ ನಿಲೈಯುಂ ..." 

"ಏಯುಂದ ಪೆರುವಾನ್ ಕೀರ್ತಿಯಿರಾಮಾನುಜ ಮುನಿತನ್ ವಾಯುಂದ ಮಲರ್ ಪಾದಮ್ ವಣಂಗುಗಿನ್ರೇನ್
ಆಯುಂದ ಪೆರುಮ್ ಶೀರಾರ್ ಶಠಗೋಪನ್ ಶೆಂದಮಿಳ್ ವೇದಂ ಧರಿಕ್ಕುಮ್ ಪೇರಾದ ಉಳ್ಳಮ್ ಪೆರ"

ಎನ್ನುವ ತನಿಯನ್ ಅನ್ನು ಶ್ರೀ ರಾಮಾನುಜರ ಪಾದಾರವಿಂದಗಳಲ್ಲಿ ಮಾಡುವ ಒಂದು ಪ್ರಾರ್ಥನೆಯಾಗಿದೆ ಈ ಪ್ರಾರ್ಥನೆಯ ಅರ್ಥ– ಅತ್ಯಧಿಕ ಕಲ್ಯಾಣ ಗುಣಶಾಲಿಯಾದ ನಮ್ಮಾಳ್ವಾರರು ರಚಿಸಿರುವ ತಿರುವಾಯ್ಮೊಳಿ ಸಹಸ್ರವನ್ನು ಚೆನ್ನಾಗಿ ಧಾರಣಮಾಡಬಲ್ಲ ಹೃದಯ ತನ್ನನ್ನು ಪಡೆಯುವುದಕ್ಕಾಗಿ ಅತ್ಯಧಿಕ ಪ್ರಶಂಸಿಸಲ್ಪಡುವ ಶ್ರೀರಾಮಾನುಜರ ಚರಣಾರವಿಂದಗಳನ್ನು ನಮಸ್ಕರಿಸುವೆನೆಂದು ಹೇಳುವುದು.

ಸ್ವಾಮಿನ್ ! ಭಗವದ್ರಾಮಾನುಜರೇ ! ತಿರುವಾಯ್ಮೊಳಿ ಸಹಸ್ರವನ್ನು ಮರೆಯದೆ ಧರಿಸತಕ್ಕ ಸಾಮರ್ಥ್ಯವನ್ನು ವರಪ್ರಸಾದವಾಗಿ ಅನುಗ್ರಹಿಸಬೇಕೆಂದು ಅವರು ತಮ್ಮನ್ನೇ ನೋಡಿ ಪ್ರಾರ್ಥಿಸುತ್ತಾರೆ.

5. ಪೆರಿಯ ತಿರುಮೊಳಿ ತನಿಯನ್‌ಗಳಲ್ಲಿ –

"ಎಂಗಳ್ ಕದಿಯೇ ಇರಾಮಾನುಜ ಮುನಿಯೇ । ಶಂಕೈ ಕೆಡುತ್ತಾಂಡ ತವರಾಸಾ । ಪೊಂಗುಪುಕಳ್ ಮಂಗೈಯರ್ ಕೋನ್ ಈಂದ ಮರೈಯಾಯಿರಮ್ ಅನೈತ್ತುಮ್ ತಂಗುಮನಮ್ ನೀಯೆನಕ್ಕು ತಾ॥" ಎನ್ನುವ ಈ ತನಿಯನ್ನು ಅದೇ ರೀತಿ ಸಮರ್ಪಕವಾಗಿದೆ. ಭಗವದ್ರಾಮಾನುಜರ ಎದುರಿಗೇ ರಚಿಸಿ ಹೇಳಿರುವುದು ತಿರುಮಂಗೈ ಆಳ್ವಾರರ ರಚಿಸಿರುವ ಪೆರಿಯ ತಿರುಮೊಳಿ ಸಹಸ್ರವನ್ನು ಧರಿಸಬಲ್ಲ ಮನಸ್ಸನ್ನು ಉಳಿಸಿಕೊಳ್ಳಲು ಅನುಗ್ರಹಿಸಬೇಕೆಂದು ಸ್ವಾಮಿ ರಾಮಾನುಜರನ್ನು ಪ್ರಾರ್ಥಿಸಲಾಗಿದೆ ಈ ತನಿಯನ್ನಿನಲ್ಲಿ.

6. ಆದ್ದರಿಂದ ಈ ಎರಡು ತನಿಯನ್ನುಗಳನ್ನು ಮನಸ್ಸಿನಲ್ಲಿ ಮನನ ಮಾಡುವಲ್ಲಿ ವಿಶೇಷವಾದ ಒಂದು ಹಿರಿಮೆಯನ್ನು ಕಾಣುತ್ತೇವೆ. ಪ್ರಬಂಧಗಳನ್ನು ಧರಿಸುವಂತಹ ಹೃದಯವನ್ನು ಅನುಗ್ರಹಿಸಬೇಕೆಂಬ ಪ್ರಾರ್ಥನೆಯನ್ನು ಆ ಆಳ್ವಾರುಗಳನ್ನು ಕುರಿತೇ ಪ್ರಾರ್ಥಿಸಬಹುದಾಗಿದ್ದಿತು; ಅವರುಗಳಿಗೆ ಅಂತರಂಗರುಗಳಾದ ಮಧುರಕವಿ, ನಾಥಮುನಿಗಳುತಹವರನ್ನಾದರೂ ಹೇಳಿರಬಹುದಾಗಿದ್ದಿತು ; ಪರಮೋದಾರರಾದ ಪರಮಾತ್ಮನನ್ನು ಪ್ರಾರ್ಥಿಸಿರಬಹುದಾಗಿದ್ದಿತು ; ಸಕಲ ವಿಧ ಸಂಪತ್ತುಗಳನ್ನು ಕೊಡಬಲ್ಲ ಮಹಾಲಕ್ಷ್ಮಿಯನ್ನು ಕುರಿತು ಪ್ರಾರ್ಥಿಸಿರಬಹುದಾಗಿದ್ದಿತು. ರಾಮಾನುಶನೂತ್ತಂದಾದಿ ಕೊನೆಯ ಪಾಶುರದೊಂದಿಗೆ ಇದು ಅತ್ಯಂತ ಹೊಂದಿಕೆಯಾಗಿದೆ. ಈ ರೀತಿಯಾದ ಮಾರ್ಗವನ್ನು ಬಿಟ್ಟು ಭಗವದ್ರಾಮಾನುಜರನ್ನು ಕುರಿತು ಪ್ರಾರ್ಥನೆ ಮಾಡಿರುವುದು ಏತಕ್ಕಾಗಿ ಎಂದು ವಿಮರ್ಶಿಸಬೇಕಾದದ್ದು ಆವಶ್ಯಕವಲ್ಲವೇ ? ಹೊಸದಾಗಿ ನಾವು ಏನನ್ನು ವಿಮರ್ಶಿಸುತ್ತೇವೆ ? ಆ ಕಾಲದಲ್ಲಿ ಆಳ್ವಾರರುಗಳ ಸತ್ಕೃತಿಗಳೆಲ್ಲಾ ಭಗವದ್ರಾ

ಶ್ರೀಭಾಷ್ಯಕಾರರಾದ ಭಗವದ್ರಾಮಾನುಜರಿಂದ ನಿರೂಪಿತವಾದ ರೀತಿಯನ್ನು ಅವಲಂಬಿಸಿವೆ ಎಂದು ನಾವು ಇದರಿಂದ ನಿಸ್ಸಂದೇಹವಾಗಿ ತಿಳಿದುಕೊಳ್ಳಬಹುದು. ಬಹಳ ಪರಿಶ್ರಮಪಟ್ಟು, ಅನೇಕ ದಿನ ಪುನಶ್ಚರಣೆ ಮಾಡಬೇಕಾದ ಈ ಮಹತ್ತಾದ ಬ್ರಹ್ಮವಿದ್ಯೆಯನ್ನು ಸ್ವಾಮಿ ಭಗವದ್ರಾಮಾನುಜರೊಬ್ಬರೇ "ಕಲಿಯುಂಕೆಡುಂ ಕಂಡುಕೊಣ್ಮಿನ್" ಎಂದು ಅರುಳಿದ್ದ ಆಳ್ವಾರರು ಪರಮಾತ್ಮನೆ ಯಿಂದಲೂ 'ಅಮುದಲ್ಲ ನಿಪ್ಪನ್' ಎಂದು ಅನುಗ್ರಹಿಸಿದ ಆಳವಂದಾರ್‌ರವರ ಅದ್ಭುತವಾದ ಅನುಗ್ರಹಾತಿಶಯ ದಿಂದಲೂ ಅನಾಯಾಸವಾಗಿ ಗ್ರಹಿಸಿ ಒಂದು ಸ್ಥಳದಲ್ಲಿಯಾದರೂ ಯಾವ ಸಂದೇಹವೂ, ವಿಸ್ಮರಣವೂ ಇಲ್ಲದೆ ತನಿಯನ್ ಗಳು ಈ ರೀತಿಯಾಗಿ ಅವತರಿಸಲು ಅವಕಾಶವಿಲ್ಲವಲ್ಲವೇ ?

7. ಹಾಗೂ, "ಏಯಂದ ಪೆರುಂಕೀರ್ತಿ" ಎನ್ನುವ ತನಿಯನ್‌ಗೆ ನಂತರ "ವಾನ್‌ತಿಗಳುಂಶೋಲೈ" ಎಂದು ಪ್ರಾರಂಭಿಸುವ ತನಿಯನ್ನಿನಲ್ಲಿ "ತಮಿಳ್‌ನರ್ಗಳ್ ಆಯಿರಮುಂ ಈನ್ದ ಮುದಲ್‌ತಾಯ್ ಶಠಗೋಪನ್ ಮೊಯಂಪಾಲ್ ವಳರ್ತ ಇದತ್ತಾಯ್ ಇರಾಮಾನುಶನ್" ಎಂದು ಹೇಳಿದೆ. ತಿರುವಾಯಿಮೊಳಿಯನ್ನು ಹಡೆದತಾಯಿ ನಮ್ಮಾಳ್ವಾರೆಂದೂ. ಸಾಕುತಾಯಿ ಭಗವದ್ರಾಮಾನುಜರೆಂದೂ ಆ ಕಾಲದಲ್ಲಿದ್ದ ಅಪ್ಪರುಗಳಾದ ಆಚಾರ್ಯರುಗಳು ಹೇಳಿರುತ್ತಾರೆಂದರೆ ದಿವ್ಯಪ್ರಬಂಧಗಳಲ್ಲಿ ರಾಮಾನುಜಾಚಾರ್ಯರು ಎಷ್ಟು ಅನುಭವವುಳ್ಳವರಿರಬಹುದು ! ದಿವ್ಯಪ್ರಬಂಧ ಗಳನ್ನು ಕಲಿಯಲು ಅಭೀಷ್ಟವಿಲ್ಲದವರನ್ನು ಪ್ರೀತಿಯಿಂದ ಕರೆದು ಕಲಿಯಲು ಆಜ್ಞಾಪಿಸಿದರು. ವ್ಯಾಖ್ಯಾನಗಳನ್ನು ರಚಿಸಲು ಆದೇಶ ನೀಡಿದರು. ಅಲ್ಲಿಯೇ ಹಿರಿಮೆಯುಳ್ಳ ನಿರ್ವಾಹಗಳನ್ನು ಮಾಡಿದರು. ಈ ರೀತಿ ಮಾಡಿದ ಅನುಗ್ರಹಪೂರ್ವಕವಾದ ಕಾರ್ಯಗಳನ್ನು ನೋಡಿಯೇ "ಮೊಯಂಪಾಲ್ ವಳರ್ತ ಇದತ್ತಾಯ್ ಇರಾಮಾನುಶನ್" ಎಂದು ಹೇಳಿದರು. ಆ ಕಾಲದಲ್ಲಿ ಶ್ರೀ ರಾಮಾನುಜಾಚಾರ್ಯರು ಅಷ್ಟು ಶ್ರದ್ಧೆ ಇಲ್ಲದೆ ಇದ್ದರೆ ದಿವ್ಯಪ್ರಬಂಧಗಳು ಶ್ರೀನಾಥಮುನಿಗಳ ಕಾಲಕ್ಕೆ ಮೊದಲು ಇದ್ದ ಹಾಗೆಯೇ ಲುಪ್ತವಾಗುತ್ತಿತ್ತು. ಹಾಗೆ ಆಗದಂತೆ ರಾಮಾನುಜರು ಮಾಡಿದ ಹಿತಚಿಂತನೆ ವಾಚಾಮಗೋಚರ. "ಸರ್ವದೇಶದಶಾ ಕಾಲೇಷು .... .. .... ರಾಮಾನುಜಾರ್ಯ ದಿವ್ಯಾಜ್ಞಾ ವರ್ಧತಾಮ್ ಅಭಿವರ್ಧತಾಮ್................ ದಿಗಂತ ವ್ಯಾಪಿನೀ ಭೂಯಾತ್ಸಾಹಿ ಲೋಕಹಿತೈಷಿಣೀ" ಎನ್ನುವ ಶ್ಲೋಕ ವನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ದಿವ್ಯಪ್ರಬಂಧ ಪಠನ ಕಾಲದಲಿ ಹೇಳಿಬರುವುದರಿಂದ ಆ ರಾಮಾನುಜಾಚಾರ್ಯ ದಿವ್ಯಾಜ್ಞೆಯು ದಿವ್ಯಪ್ರಬಂಧ ವಿಷಯವಲ್ಲದೆ ಬೇರೆ ವಿಷಯವಲ್ಲ, ಎನ್ನುವುದನ್ನು ಚೆನ್ನಾಗಿ ತಿಳಿಯಬಹುದು.

8. ಪ್ರಪಂಚದಲ್ಲಿ ಹುಟ್ಟಿದವರುಗಳಿಗೆ ಹೊತ್ತು ಹೋಗುವುದಕ್ಕೆ ಅನೇಕ ಮಾರ್ಗಗಳಿದ್ದರೂ "ಕಾರಕಲಂದ ಮೇನಿಯಾನ್ ಕೈಕಲಂದ ಆಧಿಯಾನ್, ಪಾರ್‌ಕಲಂದ ವಲ್ಲಯಿತ್ತಾನ್ ಪಾಂಬಣೆಯಾನ್ ಶೀರ್‌ಕಲಂದಶೊಲ್ ನಿನ್ನೆಂದು ಪೋಕ್ಕಾರೇಲ್ ಶೂಧಿವಿನೆಯಿನ್ ಆಧಿತುಯರ್ನೈ. ಎನ್ನಿನ್ನೆಂದು ಪೋಕ್ಕುವರ್ ಇಪ್ಪೋದು" ಎಂದು ನಮ್ಮಾಳ್ವಾರರು ಹೇಳಿರುವ ಹಾಗೆ ಭಗವದ್ಗುಣಾನುಭವದಿಂದ ಹೊತ್ತು ಕಳೆಯುವುದೇ ಸರ್ವೋತ್ತಮವೆಂದು ಅನುಭವ ರಸಿಕರುಗಳು ಕೆಲವರು ತಿಳಿದುಕೊಂಡಿರುತ್ತಾರೆ.

ನಾಸ್ತಿಕರಾಗಿರುವವರೂ ಕೂಡ ಕೆಲವು ಸಮಯಗಳಲ್ಲಿ ಭಕ್ತಿ ತಲೆ ಎತ್ತಿದಾಗ ಭಗವದ್ಗುಣಗಳನ್ನು ಕುರಿತಾದ ಪುಸ್ತಕಗಳನ್ನು ಓದಲು ಇಷ್ಟಪಡುವವರನ್ನು ನಾವು ಕಾಣುತ್ತೇವೆ. ಹಾಗೆ ಓದಲು ಇಷ್ಟಪಡುವ ಪುಸ್ತಕಗಳಲ್ಲಿ ಆಳ್ವಾರು ಗಳು ಕರುಣಿಸಿದ ದಿವ್ಯಪ್ರಬಂಧವೇ ಶ್ರೇಷ್ಠಸ್ಥಾನದಲ್ಲಿ ಉಳಿದುಕೊಳ್ಳುತ್ತೆ. ಅರ್ಥವೂ ತಿಳಿಯದೆ ಇದ್ದರೂ ಪಾಶುರ ಗಳನ್ನು (ಶ್ಲೋಕ) ಓದುವಾಗಲೇ ಅದ್ಭುತವಾದ ಆತ್ಮಾನಂದವುಂಟಾಗುತ್ತೆ ಎಂದು ಅನೇಕರು ಹೇಳುವುದನ್ನು ನಾವು ಕೇಳಿರುತ್ತೇವೆ. ಅರ್ಥವೂ ತಿಳಿದು ಅನುಭವಿಸುವಂತಾದರೆ ವಿಲಕ್ಷಣವಾದ ಆನಂದಪ್ರವಾಹ ಆತ್ಮನಲ್ಲುಂಟಾಗಿ ಭಾವಲಹರಿ ಗಳು ಏಳುವುದರಲ್ಲಿ ಸಂದೇಹವೇ ಇಲ್ಲ.

9. ವೇದ ವೇದಾಂತಗಳು ಮೊದಲಾದ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತರಾದ ಪೂರ್ವಾಚಾರ್ಯರುಗಳು— ಶ್ರೀಮನ್ನಾಥಮುನಿಗಳು, ಆಳವಂದಾರ್, ಶ್ರೀ ರಾಮಾನುಜರು, ಪರಾಶರಭಟ್ಟರು, ಕೂರತ್ತಾಳ್ವಾನ್ ಮೊದಲಾದ ಆಚಾರ್ಯ ವರ್ಗದವರೂ ಕೂಡ ಈ ದಿವ್ಯ ಪ್ರಬಂಧಗಳಲ್ಲಿಯೇ ಸಮಯವನ್ನು ಕಳೆದರೆಂದರೆ ಇದರ ಮಾಧುರ್ಯ ಎಂತಹದ್ದಾಗಿರಬೇಕು ?

10. ಕೀರ್ತಿಮೂರ್ತಿಯವರಾದ ಶ್ರೀಮಾನ್ ಗೋವರ್ಧನ ಆದ್ಯ ರಂಗಾಚಾರ್ಯ ಸ್ವಾಮಿ ಉತ್ತರ ದೇಶದಲ್ಲಿ ಪ್ರಖ್ಯಾತರಾಗಿದ್ದು ವೃಂದಾವನದಲ್ಲಿ ದಿವ್ಯದೇಶ ಪ್ರತಿಷ್ಠೆಮಾಡಿದ ಕಾಲದಲ್ಲಿ 'ಸುದರ್ಶನ ಶಾಸ್ತ್ರಿ' ಎಂದೊಬ್ಬರು ಉತ್ತರಾದಿ ಬ್ರಾಹ್ಮಣರು ಅವರ ಚರಣಾರವಿಂದಗಳಲ್ಲಿ ಆಶ್ರಯಿಸಿದ್ದರು. ಅವರು ಚತುರಶಾಸ್ತ್ರ ಪಂಡಿತರು. ಗೋವರ್ಧನ ಸ್ವಾಮಿಗೆ ಬಲಗೈಯಾಗಿ ಪ್ರಕಾಶಿಸಿದವರು. ಅವರು ಗೋವರ್ಧನ ಸ್ವಾಮಿ ಸಾನಿಧ್ಯದಲ್ಲಿ ತಿರುವಾಯ್‌ಮೊಳಿಗೆ ವ್ಯಾಖ್ಯಾನವಾದ ಭಗವದ್ವಿಷಯವನ್ನು ಕಾಲಕ್ಷೇಪ ಮಾಡಿದರಂತೆ. ಆಗ ಅವರ ಮನಸ್ಸಿನಲ್ಲಿ ತೋರಿದ್ದನ್ನು ಅವರೇ ಅನೇಕ ಶ್ಲೋಕಗಳಾಗಿ ರಚಿಸಿ ಪ್ರಕಟಿಸಿರುತ್ತಾರೆ. ಆ ಶ್ಲೋಕಗಳ ತಾತ್ಪರ್ಯನ್ನು ಇಲ್ಲಿ ಗಮನಿಸಬಹುದು.

ಈ ಪ್ರಪಂಚದಲ್ಲಿ ಅಸಂಖ್ಯಾತ ಶಾಸ್ತ್ರಗಳು ಪ್ರಕಟವಾಗಿದ್ದರೂ ಆಳ್‌ವಾರುಗಳ ದಿವ್ಯಪ್ರಬಂಧಕ್ಕೆ ಸಮಾನವಾದ ಶಾಸ್ತ್ರ ಯಾವುದೂ ಇಲ್ಲ. ಅದಕ್ಕೆ ವ್ಯಾಖ್ಯಾನಗಳನ್ನು ರಚಿಸಿರುವ ಆಚಾರ್ಯರುಗಳೇ ನಿಜವಾದ ಬ್ರಹ್ಮವಿತ್ತ್ಗಳು ಆ ರೀತಿಯಾದ ದಿವ್ಯಪ್ರಬಂಧಗಳ ವ್ಯಾಖ್ಯಾನವನ್ನು ಓದಿ ತಿಳಿದುಕೊಳ್ಳಲು ಯೋಗ್ಯವಾದ ಜನ್ಮವೇ ಜನ್ಮ. ನಾನು ತಮಿಳು ಭಾಷೆಗೆ ಅಪರಿಚಿತವಾದ ಯಮುನಾ ದಡದಲ್ಲಿ ಹುಟ್ಟಿ ಕೆಟ್ಟೆನಲ್ಲ! ಆದರೂ ಆ ಮಹಾರ್ಥಗಳನ್ನು ಒಂದು ರೀತಿಯಿಂದ ಕೇಳುವ ಭಾಗ್ಯವನ್ನು ಪಡೆದೆನಲ್ಲ ಎಂದು ಸಂತೋಷಪಡುತ್ತೇನೆ. ಶ್ರೀಮನ್ನಾರಾಯಣ ! ಗೋವರ್ಧನ ಸ್ವಾಮಿಯ ಚರಣಾರವಿಂದಗಳಲ್ಲಿ ಆಶ್ರಯಿಸಿ ಸ್ವಾಮಿರಾಮಾನುಜರ ಸಂಬಂಧವನ್ನು ಪಡೆದ ನನಗೆ ಮೋಕ್ಷಪ್ರಾಪ್ತಿಯಲ್ಲಿ ಸಂದೇಹ ಲೇಶವೂ ಇಲ್ಲ. ಆದರೂ ಶ್ರೀಮನ್ನಾರಾಯಣಾ ! ನನಗೆ ಈ ಜನ್ಮದಲ್ಲಿ ಮೋಕ್ಷವನ್ನು ಕೊಡಬಾರದೆಂದು ನಿನ್ನ ಪಾದ ಪದ್ಮಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಪ್ರಾರ್ಥಿಸುತ್ತೇನೆ. ನೀನು ನನ್ನನ್ನು ತಮಿಳು ನಾಡಿನಲ್ಲಿ ಹುಟ್ಟಿಸಿ ನಾಲಾಯಿರ ಅಧ್ಯಾಪಕನೆನ್ನುವ ಬಿರುದನ್ನು ಕೊಡಿಸಿ ಆಳ್‌ವಾರುಗಳ ಶ್ರೀಸೂಕ್ತಿಗಳನ್ನು ಬಾಯಿಯಿಂದ ಪ್ರವಚನ ಮಾಡುವ ಹಾಗೆ ಹತ್ತಾರು ಜನ್ಮಗಳನ್ನು ಕೊಟ್ಟು, ಅನಂತರವೇ ನೀನು ನನ್ನನ್ನು ನಿನ್ನ ಅಡಿದಾವರೆಗಳಿಗೆ ಸೇರಿಸಿಕೊಳ್ಳಬೇಕು. ಹೀಗಲ್ಲದೆ ನಾರಾಯಣಾ ! ನನಗೆ ನೀನು ಮೋಕ್ಷಕೊಟ್ಟು ಬಿಟ್ಟಿದ್ದೇ ಆದರೆ "ನಚ ಪುನರಾವರ್ತತೇ, ನಚ ಪುನರಾವರ್ತತೇ" ಎನ್ನುವ ಬ್ರಹ್ಮಸೂತ್ರವನ್ನು ಹರಿದು ಎಸೆದುಬಿಟ್ಟು ಈ ಲೋಕಕ್ಕೆ ಪುನಃ ಬಂದು ತಾಮ್ರಪರ್ಣಿ ತೀರದಲ್ಲೂ ಕಾವೇರಿ ದಡದಲ್ಲಿಯೂ ಶ್ರೀಪೆರುಂಬುದೂರು ಪ್ರಾಂತದಲ್ಲಿಯೂ ಜನ್ಮವನ್ನು ಪಡೆದೇ ತೀರುವೆನು" ಎಂದು.

ಈ ರೀತಿಯಾದ ನಿರ್ವೇದವನ್ನು ಬೋಧಿಸಿ ಅನೇಕ ಶ್ಲೋಕಗಳನ್ನು ರಚಿಸಿರುತ್ತಾರೆ. ಆ ಸುದರ್ಶನಾಚಾರ್ಯರೆಂಬ ಪಂಡಿತರು.

11. ಅವರ ಜೊತೆಯಲ್ಲಿದ್ದ ಮತ್ತೊಬ್ಬ ಪಂಡಿತರು ಬರೆದಿರುವುದು— "ಆಸಾಮಹೋ ಚರಣರೇಣು ಜುಷಾಮಹಮ್ ಸ್ಯಾಮ್ ಬೃಂದಾವನೇ ಕಿಮಪಿ ಕುಲಮ್ ಲತೌಷಧೀನಾಮ್, ಯಾದುಸ್ತ್ಯಜಮ್ ಸ್ವಜನಮ್ ಆರ್ಯ ಪದಂಚ ಹಿತ್ವಾ ಭೇಜುರ್ಮುಕುಂದ ಪದವೀಮ್ ಮುನಿಭಿಃ ವಿಮೃಗ್ಯಾಮ್ (ವೇದಗಳಿಂದ ಹುಡುಕಲ್ಪಡುವ ಕೃಷ್ಣನು ಹೋದ ಮಾರ್ಗವನ್ನು ಯಾವ ಕೆಲವು ಸ್ತ್ರೀಯರು ಸ್ವಜನರನ್ನು ಅತಿಕ್ರಮಿಸಿ ಹಿಂಬಾಲಿಸಿದರೋ ಅವರುಗಳ ಪಾದಧೂಳಿಯನ್ನು ಭಜಿಸಲು ಚೆನ್ನಾಗಿರುವ ವೃಂದಾವನದಲ್ಲಿರುವ ಚಿಕ್ಕಗಿಡಗಳು, ಲತೆಗಳು, ಔಷಧಿಗಳು ಮೊದಲಾದುವುಗಳಲ್ಲಿ ಯಾವುದಾದರೂ ಒಂದಾಗಿ ಹುಟ್ಟಬೇಕು.) ಎಂದು 'ಅಹಂ ಕದಂಬೋ ಭೂಯಾಸಂ ಮುಕುಂದೋವಾ ಯಮುನಾತಟೇ'

[illegible]ಮುನಾ ತೀರದಲ್ಲಿ ಶ್ರೀಕೃಷ್ಣನ ಚ[illegible]ಗಳಿಂದ ತುಳಿಯಲ್ಪಡುವ [illegible]ವಾಗಿಯೋ, ಕುಂದವೃಕ್ಷ[illegible]ವಾಗಿಯೋ ಹುಟ್ಟಬೇಕು ಎಂದು ಮೊದಲು ಋಷಿವರು ಮೊದಲಾದವರು ಪ್ರಾರ್ಥಿಸಿದ್ದಾಗಿ ಹೇಳುತ್ತಾರೆ; ಆ ಜನ್ಮಗಳೆಲ್ಲಾ ಎಕೆ ? ದಿವ್ಯ ಪ್ರಬಂಧಗಳನ್ನು ಅಧ್ಯಯನ ಮಾಡಲು ಸುಖವಾಗಿರುವ ಜನ್ಮವಲ್ಲವೇ ಜನ್ಮ –

12. ಆದ್ದರಿಂದ ಈ ರೀತಿ ಇತರ ಸ್ಥಳದವರೂ ಕೂಡ ಹೆಮ್ಮೆಪಡುವ ದಿವ್ಯ ಪ್ರಬಂಧಗಳ ಪ್ರಮುಖ ವ್ಯಾಖ್ಯಾನಗಳನ್ನು ಆನಂದವಾಗಿ ಅನುಭವಿಸಲು ಅನುಕೂಲವಾದ ಜನ್ಮವನ್ನು ಪಡೆದು ಜನ್ಮಾಂತರ ತಪಸ್ಸಿನ ಫಲವಾಗಿ ನಮಗೆ ಶ್ರೀ ವೈಷ್ಣವ ಸಂತತಿಯಲ್ಲಿ ಜನ್ಮ ದೊರೆಯಿತೆಂದು ಸಂತೋಷದಿಂದ ದಿವ್ಯ ಪ್ರಬಂಧಗಳನ್ನು ಅಧ್ಯಯನಮಾಡಿ ಬಾಳಲು ಭಾಗ್ಯವಿಲ್ಲದೆ ಹೋದರೂ ಅದರಲ್ಲಿ ಅಪಕರ್ಷ ಬುದ್ಧಿಯಾದರೂ ಇಲ್ಲದಿರಬಹುದು. ಆ ದ್ವೇಷವು ಒಳ್ಳೆಯದಕ್ಕೆ ಮೂಲವೆಂದು ಹೇಳಿರುತ್ತೆ. ಅಲ್ಲವೇ ? ದಿವ್ಯಪ್ರಬಂಧವೇ ಜೀವನವಾಗಿ ಇದ್ದ ಮಹಾಪುರುಷರುಗಳ ಕುಲದಲ್ಲಿ ಹುಟ್ಟಿ, ದಿವ್ಯಪ್ರಬಂಧದಲ್ಲಿ ಅಪ್ರತಿಪತ್ತಿಯೂ ವಿಪ್ರತಿಪತ್ತಿಯೂ ಉಂಟಾದವರುಗಳು "ನ ನಿರಸನೀಯಾಃ ಅಪಿತು ಶೋಚನೀಯಾಃ" ಅಸ್ತು ! ದಿವ್ಯಪ್ರಬಂಧಗಳಲ್ಲಿ ವೇದಾಂತಾಚಾರ್ಯರಿಗೆ ಅತ್ಯಧಿಕವಾದ ಗೌರವವಿತ್ತು.

ಆಳ್‌ವಾರ್ ಶ್ರೀಸೂಕ್ತಿಗಳಲ್ಲಿ ಕಂಡುಬರುವ ಗುಣ ವಾತ್ಸಲ್ಯವೇ ಎನ್ನುವುದು ಶ್ರೀ ಪಿಳ್ಳೈ ಲೋಕಾಚಾರ್ಯರ ರಹಸ್ಯಗಳೊಂದಿಗೆ ಶ್ರೀ ವೇದಾಂತಾಚಾರ್ಯರ ರಹಸ್ಯಗಳೊಂದಿಗೆ ಸಮಾನವಾಗಿ ಎಲ್ಲದರಲ್ಲಿಯೂ ಸ್ಪಷ್ಟವಾಗಿ ತಿಳಿಸಿರುತ್ತೆ. ಆದ್ದರಿಂದ ಈ ವಾತ್ಸಲ್ಯಗುಣವನ್ನು ಆಳ್ವಾರರು ಸಮಾನ ಗುಣವನ್ನಾಗಿ ಮನಸ್ಸಿಗೆ ತೆಗೆದುಕೊಂಡದ್ದರಿಂದ, ಸ್ವಾಮಿ ರಾಮಾನುಜರು ಇದನ್ನು ಇತರ ಹಿರಿಯ ಗುಣಗಳೊಂದಿಗೆ ಸೇರಿಸಿ ಹೇಳಿದ್ದರಿಂದ ತೃಪ್ತಿಹೊಂದದೆ ಬೇರೆಯಾಗಿಯೂ ಒಂದು ವಾಕ್ಯವನ್ನು ಇದಕ್ಕಾಗಿ ರಚಿಸಿದರು, ಆದ್ದರಿಂದ ಆಳ್‌ವಾರರ ಶ್ಲೋಕಗಳಲ್ಲಿ ರಾಮಾನುಜರು ಇಟ್ಟಿದ್ದ ಗೌರವಾತಿಶಯ ವಿಶದವಾಗುತ್ತೆ,

# ಶ್ರೀರಂಗ ಗದ್ಯ ಶ್ರೀಸೂಕ್ತಿ - ತಿರುವಾಯ್ಮೊಳಿ

1. ಸ್ವಾಮಿ ಭಗವದ್ರಾಮಾನುಜರು ರಚಿಸಿರುವ ಶ್ರೀರಂಗ ಗದ್ಯದ ಪ್ರಾರಂಭ "ಸ್ವಾಧೀನ ತ್ರಿವಿಧ ಚೇತನಾ ಚೇತನ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದಮ್" ಎನ್ನುವುದು. ಚೇತನರ ಮತ್ತು ಅಚೇತನ ವಸ್ತುಗಳ ವಿವಿಧ ಸ್ವರೂಪ ಲಕ್ಷಣವೇನು, ಪ್ರವೃತ್ತಿ ನಿವರ್ತಿ ಇವುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡಿರುವವನು ಪರಮಾತ್ಮನು ಎಂದು ಮೇಲಿನ ಸೂಕ್ತಿಗೆ ಅರ್ಥವಾಗುತ್ತೆ. ಈ ವಿಷಯವನ್ನು ಭಗವದ್ರಾಮಾನುಜರು ಯಾವ ಪ್ರಮಾಣವನ್ನು ತೆಗೆದುಕೊಂಡು ರಚಿಸಿದರು ? ಎಂದು ಆಲೋಚನೆಮಾಡಿ ಕಾಂಚೀ ಜಗದಾಚಾರ್ಯ ಸಿಂಹಾಸನಾಧಿಪತಿ ಪ್ರ. ಭ. ಅಣ್ಣಂಗರಾಚಾರ್ಯ ಸ್ವಾಮಿಯವರು ಕೆಳಕಂಡಂತೆ ವಿವರಿಸುತ್ತಾರೆ.

2. ಸ್ವಾಮಿ ರಾಮಾನುಜರು ರಚಿಸಿರುವ ಶ್ರೀ ಸೂಕ್ತಿಗಳು ಅಧಿಕವಾಗಿ ತಿರುವಾಯ್ಮೊಳಿಯನ್ನು ಅನುಸರಿಸಿಯೇ ಇದೆ ಎನ್ನುವುದು ಹಿರಿಯರ ಅಭಿಪ್ರಾಯ. ಇದನ್ನು ಪ್ರ. ಭ. ಸ್ವಾಮಿ ತಮ್ಮ ವಿಮರ್ಶೆಯಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಪ್ರಕೃತ ವಿಷಯವನ್ನು ಕುರಿತು ವಿಮರ್ಶಿಸಿದರೆ ತಿರುವಾಯ್ಮೊಳಿಯ ಮೊದಲ ಹತ್ತು ಪಾಶುರಗಳಲ್ಲಿ 4, 5, 6 ನೇ ಪದ್ಯ ಕ್ರಮವಾಗಿ ಹೇಳಿರುವ ಅರ್ಥವನ್ನೇ ಸರಿಪಡಿಸಿ ಸೇರಿಸಿ ಸ್ವಾಧೀನೇತ್ಯಾದಿ ಸೂಕ್ತಿಗಳನ್ನೇ ರಾಮಾನುಜಾಚಾರ್ಯರು ಹೇಳಿರುತ್ತಾರೆಂದು ನಿರ್ದಿಷ್ಟವಾಗಿ ತಿಳಿಯುತ್ತದೆ. "ನಾಮ್ ಅವನ್ ಇವನ್ ಉವನ್" ಎನ್ನುವ ನಾಲ್ಕನೇ ಪದ್ಯದ ಅರ್ಥವೇನು:- ನಾವು ಮೊದಲಾದ ತಮ್ಮನ್ನು ಮೊದಲಾದ ವಸ್ತುವನ್ನು ; "ಅವನ್ ಇವನ್ ಉವನ್" ಎನ್ನುವ ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ ವಸ್ತುಗಳೂ "ಅವಳ್ ಇವಳ್ ಉವಳ್" ಎನ್ನುವ ಸ್ತ್ರೀಲಿಂಗ ವಸ್ತುಗಳೂ 'ಎವಳ್' ಎನ್ನುವ ಸ್ತ್ರೀಲಿಂಗ ಪ್ರಶ್ನಾರ್ಥಕ ವಸ್ತುಗಳು, 'ಅವರ್ ಇವರ್ ಉವರ್' ಎನ್ನುವ ಸುತ್ತಲಿರುವ ಅನೇಕ ವಸ್ತುಗಳೂ 'ಅದು ಇದು ಉದು' ಎನ್ನುವ ನಪುಂಸಕ ಬಹುವಚನ ಸುತ್ತಲಿರುವ ವಸ್ತುಗಳೂ ಯಾವುದನ್ನು ಎನ್ನುವ ಪ್ರಶ್ನಾರ್ಥಕ ವಸ್ತುಗಳೂ, ನಶ್ವರವಾದ ಸ್ಥಿತಿಯಲ್ಲಿರುವ ವಸ್ತುಗಳೂ 'ಇವೈ ಅವೈ ಉವೈ' ಎನ್ನುವ ಒಳ್ಳೆಯ ವಸ್ತುಗಳೂ ಕೆಟ್ಟ ವಸ್ತುಗಳೂ, ಭೂತ ಭವಿಷ್ಯದ್ವರ್ತಮಾನವಾದ ಎಲ್ಲಾ ವಸ್ತುಗಳೂ ಆ ಸರ್ವೇಶ್ವರನಂತೆ-

ಅದು ಏನು ? ಸರ್ವೇಶ್ವರನು ಮಾಡಿದ ಆಜ್ಞೆಯೇ ಎನ್ನುವುದು. ಪ್ರಪಂಚದಲ್ಲಿರುವ ಚೇತನಾ ಚೇತನ ವಸ್ತುಗಳೆಲ್ಲಾ ಈ ಪಟ್ಟಿ ಪದ್ಯದಲ್ಲಿ ಉಕ್ತಿ ವೈಚಿತ್ರ ದಿಂದ ಅಡಗಿಕೊಂಡು, ಇವುಗಳೆಲ್ಲದರ ಸ್ವರೂಪ ಭಗವದಧೀನ ಎಂದು ತಿಳಿಸುವುದರಿಂದ ಇದನ್ನೇ "ಸ್ವಾಧೀನ ತ್ರಿವಿಧ ಚೇತನ ಸ್ವರೂಪ" ಎನ್ನುತ್ತಾರೆ ಸ್ವಾಮಿ, ನಂತರವೂ ನೋಡಿ.

3. ಇದರ ನಂತರ 5 ನೇ ಪದ್ಯದ 'ಅವರವರ್ ತಮತಮದು" ಎನ್ನುವುದು ಇದರ ತಾತ್ಪರ್ಯವೇನು : ಪ್ರಪಂಚದಲ್ಲಿ ಅನೇಕ ತರಹ ಅಧಿಕಾರಿಗಳು ಇರುತ್ತಾರೆ. ಅವರವರುಗಳು ತಮ್ಮ ತಮ್ಮ ಕುತೂಹಲಕ್ಕೆ ತೋಚಿದ ಹಾಗೆ ಒಂದೊಂದು ದೇವರನ್ನು ಸ್ವಾಮಿಯಾಗಿ ತಿಳಿದು ಆಶ್ರಯಿಸುತ್ತಾರೆ. ಈ ರೀತಿ ಅವರುಗಳಿಂದ ಪೂಜಿಸಲ್ಪಡುವ ಆಯಾ ದೇವತೆಗಳು ಅಪೇಕ್ಷಿಸುವ ಫಲವನ್ನು ಕೊಡುವುದರಲ್ಲಿ ಕೊರತೆ ಇಲ್ಲ ಯಾವುದರಿಂದ ಎಂದರೆ ; ಸರ್ವ ಸ್ವಾಮಿಯಾದ ಶ್ರೀಮನ್ನಾರಾಯಣನು ಅವರವರು ತಮ್ಮ ತಮ್ಮ ಅದೃಷ್ಟಾನುಸಾರವಾಗಿ ಫಲವನ್ನು ಪಡೆಯುವಂತೆ ಆಯಾ ದೇವತೆ

ಗಳಿಗೆ ಅಂತರ್ಯಾಮಿಯಾಗಿ ನಲಿಸಿ ಇರುತ್ತಾನೆ. ಆದ್ದರಿಂದಲೇ– ಎನ್ನುವುದು. ಇದರಿಂದ ಏನು ಹೇಳಿದ ಹಾಗಾಯಿ ತೆಂದರೆ ; ಪ್ರಪಂಚದಲ್ಲಿ ನಡೆಯುವ ರಕ್ಷಣ ಕಾರ್ಯವೆಲ್ಲವೂಭಗವಂತನದೇ ; ಬ್ರಹ್ಮಾ, ಶಿವ, ಇಂದ್ರ ಮೊದಲಾದ ಇತರ ದೇವತೆಗಳನ್ನು ಕುರಿತೂ ಮತ್ತು ಇತರ ಕ್ಷುದ್ರ ದೈವಗಳನ್ನು ಕುರಿತೂ ಅವರವರುಗಳು ಪ್ರಕಟ ಪಡಿಸಿರುವುದು ತಾವು ತಾವು ಅಪೇಕ್ಷಿಸಿದ ಫಲಗಳನ್ನು ಪಡೆದ ಹಾಗೆ ಕಂಡರೂ ಅದು ಸಹ ಭಗವಂತನೇ ಆ ದೇವತೆಗಳಿಗೂ ಅಂತರ್ಯಾಮಿ ಯಾಗಿದ್ದು ನಡೆಸುವ ಲಕ್ಷಣವೇ ಹೊರತು ಆ ದೇವತೆಗಳೇ ಸ್ವತಂತ್ರವಾಗಿ ಮಾಡಿಬಿಡುವ ಲಕ್ಷಣವಲ್ಲ ಎನ್ನುವುದಾಯಿತು.

"ನಹಿ ಪಾಲನ ಸಾಮರ್ಥ್ಯಮ್ ಋತೇ ಸರ್ವೇಶ್ವರಂ ಹರಿಮ್" ಎಂದೂ "ನ ಸಂಪದಾಂಸಮಾಹಾರೇ ವಿಪದಾಂ ವಿನಿವರ್ತನೇ। ಸಮರ್ಥೋ ದೃಶ್ಯತೇ ಕಶ್ಚಿತ್ತಂ ವಿನಾ ಪುರುಷೋತ್ತಮಮ್'' ಎಂದು ಇರುವ ಪ್ರಮಾಣ ಗಳನ್ನು ಕುರಿತು ಹೇಳಿದುದಂತೆ. ಆದ್ದರಿಂದ ಈ ಪದ್ಯದ ಪ್ರಮೇಯವನ್ನು ಸೇರಿಸಿಕೊಂಡು ''ಸ್ವಾಧೀನ ತ್ರಿವಿಧ ಚೇತನಾ ಚೇತನ ರಕ್ಷಣೆಯನ್ನು ತನ್ನಧೀನವಾಗಿ ಉಳ್ಳವನೆಂದು ನಂತರವೂ ನೋಡಿ–

4. ಇನ್ನು, ಇದರ ನಂತರವೂ ಆರನೆಯ ಪದ್ಯ ''ನಿನ್ನವರ್ ಇರಂದನರ್'' ಎನ್ನುವುದು. ಈ ಪದ್ಯದ ಅರ್ಥವೇನು ? ನಿಲ್ಲುವರು ಇರುವವರು ಮಲಗಿರುವವರು ತಿರುಗಾಡುವವರು ಮೊದಲಾದ ಈ ರೀತಿ ಪ್ರವೃತ್ತಿಯುಳ್ಳ ವರೂ ನಿಲ್ಲದವರು ಇಲ್ಲದವರು ಮಲಗದವರು ತಿರುಗಾಡದಿದ್ದವರೂ ಆದ ಇಂತಹ ನಿವೃತ್ತಿ ಶೀಲರುಗಳೂ ಭಗವಂತನ ಆಜ್ಞೆಯಿಂದಲೇ ಎನ್ನುವಂತೆ ಎಂದು. ಇದರಲ್ಲಿ ಪ್ರವೃತ್ತಿ ಶೀಲರುಗಳನ್ನೂ, ನಿವೃತ್ತಿ ಶೀಲರನ್ನೂ ಹೇಳಿದ್ದರೂ ಅವರು ಅವರು ಇಲ್ಲಿ ವಿವಕ್ಷಿತರಲ್ಲ. ಮೇಲೆ–

"ನಾಮುವನಿವನುವನ್'' ಎನ್ನುವ ಪದ್ಯದಲ್ಲಿಯೇ ಧರ್ಮಿಗಳಾದ ಸಕಲರನ್ನೂ ಸೇರಿಸಿ ಹಿಡಿದೆತ್ತಿ ಅವರು ಗಳೆಲ್ಲಾ ಭಗವಂತನ ಕಟ್ಟಳೆ ಎಂದು ಹೇಳಿರುವ ವಿಷಯವಾದ್ದರಿಂದ ಈ ಪದ್ಯ ಅದರೊಂದಿಗೆ ಪುನರುಕ್ತವಾಗಕೂಡದು. ಅವರಲ್ಲಿ ಹೇಳದೆ ಇರುವ ವಿಷಯವೇ ಇಲ್ಲಿ ಹೇಳತಕ್ಕದ್ದಾಗಬೇಕು. ಆದ್ದರಿಂದಲೇ ಪ್ರವೃತ್ತಿ ನಿವೃತ್ತಿಗಳು ಎಂದು ಭಗವಂತನು ನೀಡಿದ ಕಟ್ಟಳೆ ಎಂದು ಹೇಳುವ ಈ ಪಾಶುರವಾದದ್ದು. ಅವರವರುಗಳ ಪ್ರವೃತ್ತಿ ನಿವೃತ್ತಿಗಳಾದ ಧರ್ಮಗಳು ಪರಮಾತ್ಮನು ನೀಡಿದ ಕಟ್ಟಳೆ ಎಂದು ಹೇಳುವುದಾಗಿದೆ. ಈಗ, 'ನಿನ್ನಿನಿರಿರುಂದನ' ಇತ್ಯಾದಿಗೆ ತಾತ್ಪರ್ಯ :– ನಿನ್ರುಲ್, ಇರುತ್ತಲ್ ಕಿಡತ್ತಲ್ ತಿರಿದಲ್ ಪ್ರವೃತ್ತಿಗಳೂ, ನಿಲ್ಲದೆ ಇರುವುದೂ, ಇಲ್ಲದೆ ಇರುವುದೂ, ಮಲಗಿಕೊಳ್ಳದೆ ರುವುದೂ, ತಿರುಗದೆ ಇರುವುದೂ ಮೊದಲಾದ ನಿವೃತ್ತಿಗಳೂ ಭಗವಂತನ ಅಧೀನವೇ ಅಲ್ಲದೆ ಬೇರೆಯಲ್ಲ. ಇದು ಸಕಲ ಪೂರ್ವಾಚಾರ್ಯರ ವ್ಯಾಖ್ಯಾನ ಸಿದ್ಧ.

5. ನಿನ್ರನರ್ ಎನ್ನುವ ನುಡಿಗೆ ನಿಲ್ಲುವುದು ಎನ್ನುವ ಅರ್ಥ ಹೇಗೆ ಆಗುತ್ತೆ ಎಂದು ಕೆಲವರ ಮನಸ್ಸಿನಲ್ಲಿ ಸಂದೇಹವುಂಟಾಗುತ್ತದೆ. ಅದಕ್ಕೆ ಉತ್ತರ– ವೇದದಲ್ಲಿ ; ಯಾಗ ಮಾಡುವವನು ಸೋಮಪಾನ ಮಾಡಬೇಕೆಂದು ಹೇಳಿರುತ್ತೆ. ಸೋಮಪಾನ ಯಾವುದು ? ಸೋಮಲತೆಯ ರಸವನ್ನು ಕುಡಿಯುವುದು. ಲತೆಯನ್ನು ಹೇಗೆ ಸಂಪಾದಿಸು ವುದು ? ಕಾಡಿಗೆ ತಾನೇ ಹೋಗಿ ಸಂಪಾದಿಸಿ ತರುವುದಾ ? ಅಲ್ಲ ಬೆಲೆ ಕೊಟ್ಟು ಕೊಂಡುಕೊಳ್ಳುವುದೇ ? ಎಂಬ ವಿಚಾರ ಬಂದಾಗ, 'ಗೋ ಅರ್ಥವೇಮ ಸೋಮಂ ಕರೋತಿ' ಎನ್ನುವ ವೇದವಾಕ್ಯವಾದದ್ದು ಹಸುವನ್ನು ಕೊಟ್ಟು ಸೋಮಲತೆಯನ್ನು ತೆಗೆದುಕೊಳ್ಳಬೇಕೆನ್ನುತ್ತದೆ. ಆ ವೇದದಲ್ಲಿಯೇ ಮತ್ತೊಂದು ಸ್ಥಳದಲ್ಲಿ ''ಅರುಣಯಾ ಪಿಂಗಾಕ್ಷ್ಯಾ ಸೋಮಂ ಕ್ರೀಣಾತಿ'' ಎಂದು ಹೇಳಿದೆ. ಸೋಮಲತೆಯ ಬೆಲೆಯಾದ ಹಸುವು ಕೆಂಪು ಬಣ್ಣವುಳ್ಳದ್ದಾಗಿಯೂ, ಪಿಂಗಳ ವರ್ಣದ ಕಣ್ಣುಳ್ಳದ್ದಾಗಿಯೂ ಇರಬೇಕೆಂದು ಹೇಳಿದೆ ಆ ರೀತಿ, ಕೆಂಪು ಹಸುವನ್ನು ತಂದುಕೊಡಬೇಕೆನ್ನುವುದು ಮೊದಲೇ ನಿಶ್ಚಿತವಾಗಿದ್ದರೆ, ಆ ತರಹದ್ದೇ– ಆಜ್ಞಾರ್ಥಕವೆಂದು ಇರುವುದರಿಂದ ಇಲ್ಲಿ ಕೆಂಪುಬಣ್ಣ ಮಾತ್ರ ಆಜ್ಞಾಪಿಸಿದೆ ಎಂದು ನಿಶ್ಚಯಿಸಲಾಗುತ್ತೆ. ''ನಿನ್ರನರಿರುಂದನರ್'' ಎನ್ನುವ ಸ್ಥಳದಲ್ಲೂ ಇದೇ ರೀತಿ.

6 ಮತ್ತೊಂದು ದೃಷ್ಟಾಂತವನ್ನು ಕೇಳಿ ; ಅಭಿಚಾರ ಯಜ್ಞದಲ್ಲಿ ಋತ್ವಿಕ್ಕುಗಳು ತಲೆಗೆ ಪೇಟಕಟ್ಟಿಕೊಂಡು ಸುತ್ತಾಡಬೇಕೆಂದು ವೇದದಲ್ಲಿ ಒಂದು ಸ್ಥಳದಲ್ಲಿ ಹೇಳಿದೆ. ಮತ್ತೊಂದು ಸ್ಥಳದಲ್ಲಿ "ಲೋಹಿತೋಷ್ಣೀಷಾ ಋತ್ವಿಜಃ ಪ್ರಚರಂತಿ" ಎಂದು ಹೇಳಿಬಿಟ್ಟಿತು. ಅದು ಏನೆಂದರೆ, ಕೆಂಪು ಬಣ್ಣದ ಪೇಟವುಳ್ಳವರಾದ ಋತ್ವಿಕ್ಕುಗಳು ಓಡಾಡಬಹುದು ಎಂದು. ಈ ಸ್ಥಳವಲ್ಲಿಯೂ, ತಲೆಯ ಪೇಟ ಧರಿಸುವುದು ವಿಧಿಪೂರ್ವಕವಾಗಿಯೇ ಪ್ರಾಪ್ತವಾದ್ದರಿಂದ ಅವರಲ್ಲಿ ಲೋಹಿತತ್ವ (ಕೆಂಪು) ಮಾತ್ರವೇ ಪ್ರಕೃತದಲ್ಲಿ ವಿಧಿ ವಿಷಯವೆಂದು ತೆಗೆದುಕೊಳ್ಳಬೇಕು. "ನಿನ್ರನರಿಂದನರ್" ಪದ್ಯದ ಪ್ರಕ್ರಿಯೆಯೂ ಇದೇ ರೀತಿ ಆಗಿದೆ. ಪ್ರವೃತ್ತಿ ಉಳ್ಳವರೂ ನಿವೃತ್ತಿ ಉಳ್ಳವರೂ ಹೇಳಿದರೂ ಪ್ರವೃತ್ತಿ ನಿವೃತ್ತಿ ಮಾತ್ರ ಇಲ್ಲಿ ವಿವಕ್ಷಿತ ಎಂದು. ಈ ಪದ್ಯದ ಪ್ರಮೇಯವನ್ನು ಸೇರಿಸಿಕೊಂಡು "ಸ್ವಾಧೀನ ತ್ರಿವಿಧ ಚೇತನಾ ಚೇತನ ಸ್ವರೂಪ ಸ್ಥಿತಿ ಪ್ರವೃತ್ತಿ ಭೇದವತ್" ಎಂದು ಹೇಳಿರುತ್ತಾರೆ, ಶ್ರೀ ರಾಮಾನುಜಾಚಾರ್ಯರು.

ಆದ್ದರಿಂದ ತಿರುವಾಯ್‌ಮೊಳಿ ಪಾಶುರಗಳು ಮುಂದಿನ ಸಾರಾರ್ಥ ಸಂಗ್ರಹವಾಗಿ ಸ್ವಾಧೀನೇತ್ಯಾದಿ (ಚೂರ್ಣೆ) ಭಗವದ್ರಾಮಾನುಜರು ರಚಿಸಿದರು.

7. ಈ ವಿಷಯ ಉಪನಿಷತ್ತುಗಳಲ್ಲಿಯೂ ಹೇಳಿದೆಯಲ್ಲವೆ ? ಶ್ರೀರಾಮಾನುಜರು ಉಪನಿಷತ್ತುಗಳಿಂದಲೇ ಹೇಳಿರುತ್ತಾರೆ ಎಂದುಕೊಳ್ಳಬಾರದಾ ಎಂದು ಕೆಲವರು ಕೇಳುತ್ತಾರೆ. ಈ ವಿಷಯ ಉಪನಿಷತ್ತುಗಳಲ್ಲಿ ಈ ರೀತಿ ಕ್ರಮಾನುಸಾರ ಎಲ್ಲಿಯೂ ಹೇಳಿಲ್ಲ, ಒಂದು ವಿಷಯ ಒಂದು ಕಡೆಯಲ್ಲಿ ಮತ್ತೊಂದು ವಿಷಯ ಇನ್ನೊಂದು ಕಡೆಯಲ್ಲಿಯೂ ಹೇಳಿರುತ್ತೆ. ಅದೂ ಇಷ್ಟು ಸಮರ್ಪಕವಾಗಿ ಹೇಳಿಲ್ಲ. ನಿಖರವಾದ ಸಾರಾರ್ಥಗಳನ್ನು ತಿಳಿವಳಿಕೆ ಬರುವಂತೆ ಹೇಳುವುದೆನ್ನುವುದು ತಿರುವಾಯ್‌ಮೊಳಿಯಲ್ಲೇ. ಶ್ರೀ ರಾಮಾನುಜರು ಯಾವುದನ್ನು ನಿಷ್ಕರ್ಷಿಸಿ ತಿಳಿಸುವುದು ತಿರುವಾಯ್‌ಮೊಳಿಯಿಂದಲೇ ಎಂದು ನಿರ್ದಿಷ್ಟವಾಗಿ ಹೇಳಲು ಏನೂ ಅಡ್ಡಿ ಇಲ್ಲ.

# “ಶ್ರೀ ವೈಕುಂಠ ಗದ್ಯಮ್”

ವನ್ದೇ ವೇದಾನ್ತ ಕರ್ಪೂರ ಚಾಮೀಕರ ಕರಣ್ಡಕಮ್ ।
ರಾಮಾನುಜಾರ್ಯ ಮಾರ್ಯಾಣಾಂ ಚೂಡಾಮಣಿ ಮಹರ್ನಿಶಮ್ ॥

ಶ್ರೀ ಭಗವದ್ರಾಮಾನುಜರು ತಮ್ಮ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡ ಅರ್ಥ ತಾಳೆಮರದ ನೆರಳಿನಂತೆ ಸಂಕುಚಿತವಾಗಿ ಇಲ್ಲದೆ ಕಲ್ಪವೃಕ್ಷದ ಛಾಯೆಯಂತೆ ಪ್ರಪಂಚಕ್ಕೆಲ್ಲಾ ಹರಡಬೇಕೆಂದು ಅಪೇಕ್ಷಿಸಿದವರಾದ್ದರಿಂದ 'ಊರಮ್ ನಾಡುಮುಲಗಮುಮ್' ತಮ್ಮ ಪೋಲೆ ಅಹಂಪಡಿ ಉಪಾಯೋಪೇಯಂಗಳೇ ನಿಕ್ಷರ್ಷಿತ್ತರುಳಿಚ್ಚೆಯದು ಪರೋಪದೇಶತ್ತಿಲ್ ಇಳಿಗಿರಾರ್'' ಈ ವೈಕುಂಠ ಗದ್ಯದ ಮುಖಾಂತರ ಹಿರಿಯ ಗದ್ಯವಾದ ಶರಣಾಗತಿ ಗದ್ಯದಲ್ಲಿ ಸಾಮಾನ್ಯವಾಗಿ ಭಗವಂತನನ್ನು ಕುರಿತಾದ ಸ್ವಪ್ರಾರ್ಥನೆಯಾಗಿ ಹೇಳಿದರು. ಚಿಕ್ಕ ಗದ್ಯವಾದ ಶ್ರೀರಂಗನಾಥನ ವಿಷಯವಾಗಿ ತಿಳಿಸಿದರು ಇದರಲ್ಲಿ ಪರತತ್ತ್ವಕ್ಕೆ ಚರಮ ಸೀಮೆಯಾದ ಶ್ರೀ ವೈಕುಂಠನಾಥನ ವಿಷಯವಾಗಿ ಇತರರನ್ನು ಕುರಿತು ಕರ್ತವ್ಯೋಪದೇಶವನ್ನು ಮಾಡಿದರು. ಇದರಲ್ಲಿ ಉಪಾಯವಾದ ಅಂಶವನ್ನು ಸಂಕ್ಷಿಪ್ತವಾಗಿ ತಿಳಿಸಿ ಉಪೇಯವಾದ ಅಂಶವನ್ನು ಅತ್ಯಧಿಕ ವಿಸ್ತಾರವಾಗಿ ತಿಳಿಸಿರುತ್ತಾರೆ.

ಚೂರ್ಣಿಕೆ :-

1. ಭಗವಂತನ ಸ್ವರೂಪ ರೂಪ ಗುಣ ವಿಭೂತಿ ವೈಲಕ್ಷಣ್ಯವನ್ನು, ತನ್ನ ಸ್ಥಿತಿಯನ್ನು ಅನುಸಂಧಾನಮಾಡಿ ಆ ಪರಮಾತ್ಮನ ಸೌಶೀಲ್ಯ ಮೊದಲಾದ ಶ್ರೇಷ್ಠ ಗುಣಗಳನ್ನೇ ಪುರುಷಾರ್ಥವಾಗಿ ಅವನ ಚರಣಾರವಿಂದವನ್ನು ಪಡೆಯಬೇಕೆನ್ನುವುದು.

2. ಪುರುಷಾರ್ಥಕ್ಕೆ ಒಂದು ಸಮಯ ನುತಿಸುವುದೇ ಸಾಕಷ್ಟಾದರೂ ಹೃದಯ ಬೇರೆ ವಿಷಯಗಳಲ್ಲಿ ಹೋಗದಿರಲು ಮತ್ತು ಕಾಲಕ್ಷೇಪಕ್ಕೆ ನಿತ್ಯಾನುಸಂಧಾನ ಮಾಡಬೇಕೆನ್ನುವುದು.

8. ಈ ಅಧಿಕಾರಿ ಅರ್ಚಿರಾದಿ ಮಾರ್ಗವಾಗಿ ಹೋಗಿ ಪ್ರಕೃತಿ ಮಂಡಲವನ್ನು ದಾಟುವ ರೀತಿಯನ್ನು, ಅಲ್ಲಿಂದ ಮುಂದೆ ನಿತ್ಯವಿಭೂತಿಯ ವೈಭವವನ್ನು ಆ ದೇಶವಿಶೇಷದ ಹಿರಿಮೆಯನ್ನು ಅಲ್ಲಿರುವ ಅಲಂಕಾರಗಳನ್ನು ಅಂತಹ ಸ್ಥಳದಲ್ಲಿ ಶ್ರೀ. ಭೂ, ನೀಳಾದೇವಿಯರು ಮತ್ತು ಭಗವಂತನು ಇರುವ ನಿಲುಮೆಯನ್ನು. ಆ ದೇವಿಯರ ಸೌಂದರ್ಯವನ್ನು ದಿವ್ಯಾಭರಣಗಳನ್ನು, ದಿವ್ಯಾಯುಧ ವರ್ಗವನ್ನು ಅನವರತವೂ ಕೈಂಕರ್ಯ ಮಾಡುವ ನಿತ್ಯಸೂರಿಗಳ ಪರಿಷತ್ತನ್ನು ಅವರ ನಿತ್ಯ ಕೈಂಕರ್ಯಕ್ಕೆ ವಶಪಟ್ಟು ಇರುವ ಸೊಬಗನ್ನು ನುತಿಸುತ್ತಾ, ಈ ಪುರುಷಾರ್ಥವನ್ನು ನಾವು ಯಾವಾಗಲೂ ಪಡೆಯಬೇಕೆಂದು ಅಪೇಕ್ಷಿಸಿ ಆ ಇಚ್ಛೆಗನುಸಾರವಾಗಿಯೇ ಹೋಗಿ ಹತ್ತಿರದಲ್ಲಿ “ಭಗವಂತನೇ ! ನನ್ನಿಂದ ನಿತ್ಯ ಕೈಂಕರ್ಯವನ್ನು ಸ್ವೀಕರಿಸಬೇಕು” ಎಂದು ಪ್ರಾರ್ಥಿಸಿ ಆತ್ಮಸಮರ್ಪಣ ಮಾಡಬೇಕು ಎನ್ನಲಾಗಿದೆ.

೪. ಸನ್ನಿವೇಕ್ಷೆಯಂತೆ ಭಗವಂತನಿಂದ ಸ್ವೀಕರಿಸಲ್ಪಟ್ಟವನಾಗಿ ಅನುಕೂಲ ವೃತ್ತಿಯನ್ನು ಮಾಡಿಕೊಂಡಿರಬೇಕೆಂದಿದೆ.

೫. ಈ ಪುರುಷಾರ್ಥವನ್ನು ಅನೇಕ ದಿನಗಳಿಂದ ಅಗಲಿದ್ದರಿಂದ ಆ ಅಗಲಿವಿಕೆಯನ್ನು ದೂರಗೊಳಿಸಿ ಕಣ್ಣವೆಯನ್ನು ಮುಚ್ಚದೆ ಯಾವಾಗಲೂ ದರ್ಶನ ಮಾಡಿಕೊಂಡಿರುವ ರೀತಿಯನ್ನು ವರ್ಣಿಸಿರುತ್ತೆ.

೬. ಈ ರೀತಿ ಬಂದು ಸೇರಿದ ಇವನನ್ನು ಭಗವಂತನು ವಿಚಾರಿಸಿ ಅತ್ಯಂತ ಆದರದಿಂದ ಕಟಾಕ್ಷಿಸಿ ತನ್ನ ಚರಣಾರವಿಂದವನ್ನು ಇವನ ಶಿರಸ್ಸಿನ ಮೇಲೆ ಇಡಲು, ಕಿರೀಟಧಾರಣೆ ಮಾಡಿಸಿಕೊಂಡ ಅರಸನಂತೆ ನಿತ್ಯಾನಂದಶಾಲಿ ಯಾಗಿರುವ ಸ್ಥಿತಿಯನ್ನು ತಿಳಿಸುತ್ತದೆ.

ಯಾಮುನಾರ್ಯ ಸುಧಾಂಭೋಧಿಮವಗಾಹ್ಯ ಯಥಾಮತಿ,
ಆದಾಯ ಭಕ್ತಿಯೋಗಾಖ್ಯಮ್ ರತ್ನಮ್ ಸಂದರ್ಶಯಾಮ್ಯಹಮ್ ॥

ತಾತ್ಪರ್ಯ :– ಆಳವಂದಾರ್ ಎಂಬ ಅಮೃತ ಸಾಗರದಲ್ಲಿ ಮುಳುಗಿ ತೇಲಿ, ಭಕ್ತಿಯೋಗವಾಗಿರುವ ರತ್ನವನ್ನು ಯಥಾಮತಿ ಗ್ರಹಿಸಿ ಪ್ರಿಯವುಳ್ಳವರಿಗೆ ಅನುಭವಿಸಲು ಕೊಡುವೆನೆಂದು. ಇಲ್ಲಿ ಯೋಗವೆನ್ನುವುದು, ಸಾಧ್ಯಭಕ್ತಿಯಾದ ಪ್ರಪತ್ತಿಯನ್ನೇ ಹೇಳಿದಂತೆ. ಇದರ ಅನಂತರ "ತತ್ಪಾದಾಂಬುಜ ದ್ವಯಂ ಪ್ರಪತ್ತೇ ರನ್ಯತನೋ ಕಲ್ಪಕೋಟಿ ಸಹಸ್ರೇಣಾಪಿ ಸಾಧನಮಸ್ತೀತಿ ಮನ್ವಾನಃ" ಎಂದು ಅನುಗ್ರಹಿಸಿರುವುದರ ಜೊತೆಗೆ ಹೊಂದುತ್ತೆ. ಆಳವಂದಾರವರ ಚರಣಾರವಿಂದವಾಗಿ ದೊರೆತ ಅರ್ಥಗಳನ್ನು ಪ್ರಿಯವುಳ್ಳವರಿಗೆ ನಿತ್ಯಾನುಪಠನಕ್ಕೆ ನೀಡಿರುವೆನೆನ್ನುವುದು ಈ ಶ್ಲೋಕದ ತಾತ್ಪರ್ಯ.

ಸ್ವರೂಪಾನುರೂಪವಾದ ಪ್ರಪತ್ತಿಯನ್ನೇ ಆತ್ಮಸಂಜೀವಿನಿಯಾಗಿ ತಿಳಿದು ಪ್ರಾಕೃತ ಮಂಡಲವನ್ನು ಬಿಟ್ಟು ಅಪ್ರಾಕೃತವಾದ ದೇಶ ವಿಶೇಷಕ್ಕೆ ಹೋಗಿ ಸರ್ವಾಂಗ ಸುಂದರನಾಗಿ ಸರ್ವಾಭರಣ ಭೂಷಿತನಾಗಿ ದಿವ್ಯಾಯುಧ ಶೋಭಿತನಾಗಿ ನಿತ್ಯಸೂರಿಗಳಿಂದ ಅನುದಿನವೂ ಸೇವಿತನಾಗಿರುವ ಶ್ರೀ ವೈಕುಂಠನಾಥನ ಹತ್ತಿರ ಕೈಂಕರ್ಯ ಪ್ರಾರ್ಥನೆಯನ್ನು ಮಾಡಿ "ಒಳವಿಲ್ ಕಾಲಮೆಲ್ಲಾಂ ಉಡನಾಯ್ ಮನ್ನಿ ವಳುವಿಲಾ ಅಡಿಮೈಗಳ್ ಶೆಯ್ಯವೇಂಡುವರ್" ಎನ್ನುವ ಆನಂದ ಸಾಮ್ರಾಜ್ಯದಲ್ಲಿ ಇರುವುದನ್ನು ಇಲ್ಲಿರುವವರಿಗೆ, ಪರಮೈಕಾಂತಿಯಾದವನು ಅನವರತವೂ ಚಿಂತಿಸುತ್ತಾ ಇರುವನೆಂದು ಸ್ಪಷ್ಟಪಡಿಸಿರುತ್ತಾರೆ.

ಎಂಬೆರುಮಾನಾರ್ ತಿರುವಡಿಗಳೇ ಶರಣಂ

# ತಿರುವಾಯ್ಮೊಳಿಯೇ ಮೂರ್ತಿವತ್ತಾದ ಬ್ರಹ್ಮಸೂತ್ರ ಭಾಷ್ಯ

ಶಾರೀರಿಕ ಮೀಮಾಂಸಾ- ದ್ವಿತೀಯಾಧ್ಯಾಯ ಸರ್ವಥಾನುಪಪತ್ತ್ಯಧಿಕರಣದಲ್ಲಿ ಸರ್ವಶೂನ್ಯವಾದಿಗಳಾದ ಬೌದ್ಧ ಏಕದೇಶಿಗಳ ಪಕ್ಷವನ್ನು ನಿರಸನಗೊಳಿಸಲಾಗುತ್ತೆ. ಪರಬ್ರಹ್ಮವೇ ಜಗತ್ಕಾರಣವೆಂದು ಚನಾ ಗಿ ನಿರೂಪಿಸಲ್ಪಡುವ ಈ ಅಧ್ಯಾಯದಲ್ಲಿ ಸರ್ವಶೂನ್ಯತ್ವ ವಾದವನ್ನು ನಿರಸಿಸಲು ಏನು ಪ್ರಸಕ್ತಿ ಎಂದು ಕೆಲವರು ಯೋಚಿಸಬಹುದು. ಜಗತ್ಕಾರಣವನ್ನು ಪ್ರಧಾನವೇ ? ಪರಮಾಣುವೇ ? ಪರಬ್ರಹ್ಮವೇ ? ಎನ್ನುವ ವಿಚಾರ ಯಾವಾಗ ಸರಿಹೊಂದುತ್ತೆ ಎಂದರೆ ; ಸತ್ಯತೆಯಲ್ಲಿ ಜಗದುತ್ಪತ್ತಿ ಎನ್ನುವದೊಂದನ್ನು ನಿರೂಪಿಸಲು ಸಾಧ್ಯವಾಗುವುದಾದರೆ ಆಗ ಹೊಂದುತ್ತೆ. ಇಲ್ಲದೆ ಇರುವ ಒಬ್ಬ ಬಾಲಕನಿಗೆ ಮಾತಾ-ಪಿತರು ಉಂಟೇ ? ಜಗದುತ್ಪತ್ತಿಯನ್ನೇ ನಿರೂಪಿಸದಿರುವಾಗ ಯಾವುದ ಜಗತ್ಕಾರಣ ಎನ್ನುವ ಚರ್ಚೆ ಏತಕ್ಕೆ ? ಉತ್ಪತ್ತಿಯಾದದ್ದು ಭಾವದಿಂದ ಅಂಗೀಕರಿಸಲ್ಪಡುತ್ತದೆಯೋ ಅಭಾವದಿಂದ ಅಂಗೀಕರಿಸಲ್ಪಡುತ್ತದೆಯೋ ಎಂದು ಕೇಳುತ್ತೇವೆ ಭಾವದಿಂದ ಎನ್ನುವುದು ಹೊಂದುವುದಿಲ್ಲ. ಮೃತ್ಪಿಂಡವನ್ನು ಉಪಮರ್ದಿಸಿಕೊಂಡು ತಾನೇ ಮಡಕೆ ಉಂಟಾಗುತ್ತೆ. ಯಾವ ಕೆಲಸದ ತತ್ತ್ವವೂ ಕಾರಣ ತತ್ತ್ವವನ್ನು ಉಪಮರ್ದಿಸದೆ ಉಂಟಾಗುವುದಿಲ್ಲ ಎನ್ನುವುದನ್ನು ಕಾಣುತ್ತಿದ್ದೇವೆ. ಕಾರಣಾಕಾರದ ವಿನಾಶ ತಾನೇ ಉಪಮರ್ದವಾಗುತ್ತೆ. ಅದೇ ಅಭಾವವು. ಆದ್ದರಿಂದ ಭಾವದಲ್ಲಿ ನಿಂತೂ ಉತ್ಪತ್ತಿ ಇಲ್ಲ ಎಂದು ನಿಶ್ಚಯವಾಯಿತು.

ಅಭಾವದಲ್ಲಿ ನಿಂತುಕೂಡ ಉತ್ಪತ್ತಿ ಇಲ್ಲ ಎನ್ನುವುದು ಅನಾಯಾಸವಾಗಿ ತಿಳಿದು ಬರುತ್ತೆ. ಅಭಾವದಿಂದ ಭಾವೋತ್ಪತ್ತಿ ಸಂಭವಿಸುವುದಿಲ್ಲ ಅಲ್ಲವೇ ? ಆದ್ದರಿಂದ ಉತ್ಪತ್ತಿಯನ್ನು ನಿರೂಪಿಸಲು ಆಗದೆ ಇರುವುದರಿಂದ ಉತ್ಪತ್ತಿಗೆ ಅನಂತರದ್ದಾದ ವಿಕಾರಗಳು ಯಾವುವೂ ದೊರೆಯುವುದಿಲ್ಲ ಎನ್ನುವುದು ಸಿದ್ಧ. ಲೋಕ ವ್ಯವಹಾರವೆಲ್ಲಾ ಭ್ರಮಮೂಲಕವೇ. ಇದು ಸರ್ವಶೂನ್ಯವಾದಿಗಳ ವಾದ ಪ್ರಕ್ರಿಯೆ.

ಈ ರೀತಿ ಶೂನ್ಯವೇ ತತ್ತ್ವ ಎನ್ನುವವರು ಇಲ್ಲಿ ನಿರಸಿಸಲ್ಪಡುತ್ತಾರೆ. "ಸರ್ವಥಾನುಪಪತ್ತೇಶ್ಚ" ಎನ್ನುವುದು ಸೂತ್ರ ಪ್ರಮೇಯಗಳೋ ಪ್ರಮಾಣಗಳೋ ಯಾವುದು ಉಂಟಾಗಿದ್ದರೆ, ಇಲ್ಲವಾಗಿದ್ದರೂ ಪೂರ್ವಪಕ್ಷಕ್ಕೆ ಅಭಿಮತವಾದ ಶೂನ್ಯತ್ವ ಒಂದು ವಿಧದಲ್ಲೂ ಹೊಂದಲಾಗದೆ ಇರುವುದರಿಂದ ಮಾಧ್ಯಮಿಕ ದರ್ಶನ ಅಸಮಂಜಸವೆನ್ನು ಮತ್ತೆ ''ಸರ್ವಮ್ ಶೂನ್ಯಮ್'' ಎಂದು ಹೇಳುವವರು ತಮಗೆ ಅಭಿಮತವಾದ ಈ ಅರ್ಥವನ್ನು ಸಾಧಿಸುವಂತಹ ಪ್ರಮಾಣ ಸದ್ಭಾವವನ್ನು ಒಪ್ಪಿಕೊಂಡಾಗಲೇ ಸರ್ವಶೂನ್ಯವಾದ ತೊಲಗಿತು. ಪ್ರಮಾಣವಿಲ್ಲ ಎನ್ನುವ ಪಕ್ಷಕ್ಕೆ ಪ್ರಮಾಣವಿಲ್ಲದ್ದರಿಂದಲೇ ತಮಗೆ ಅಭಿಮತವಾದ ಅರ್ಥ ಅಸಿದ್ಧವೆಂದು ಮುಗಿಯಿತು. ಅನಂತರವೂ, ಸರ್ವಮ್ ಶೂನ್ಯಮ್ ಎನ್ನುವ ಈ ಮಾತಿನಿಂದ ನಾಸ್ತಿತ್ವ ತಾನೇ ವಿವಕ್ಷಿತವಾಗುತ್ತದೆ. ಒಂದು ರೂಪವನ್ನು ಬಿಟ್ಟು ಮತ್ತೊಂದು ರೂಪವನ್ನು ಹೊಂದುವುದೇ ನಾಸ್ತಿ ಪದಾರ್ಥವಾಗುವದರಿಂದ ರೂಪಾಂತರದಿಂದ ಅಸ್ತಿತ್ತ್ವವೇ ಹೇಳಿದ ಹಾಗೆ ಮುಗಿಯುತ್ತೆ. ಮಣ್ಣಿನ ಮುದ್ದೆ ಒಂದು ಇದ್ದಿತು. ಮಡಕೆ ಕಾಣಿಸಿಕೊಳ್ಳುವಾಗ ಆ ಮೃತ್ಪಿಂಡ ನಾಶ ಹೊಂದುತ್ತೆ. ಆದರೆ ನಾಶವಾದ್ದರಿಂದ ''ಮೃತ್ಪಿಂಡೋನಾಸ್ತಿ'' ಎಂದು ಹೇಳುತ್ತಾನೆ. ಈ ವ್ಯವಹಾರದಲ್ಲಿಘಟ ಎನ್ನುವ ಅವಸ್ಥೆ ತಾನೇ ವಿಷಯವಾಗುತ್ತೆ.

ಪ್ರಪಂಚದಲ್ಲಿ ಅಸ್ತಿನಾಸ್ತಿತ್ವಗಳನ್ನು ಪ್ರಕಟಿಸುವವರು. ಇಲ್ಲಿ ಮಣ್ಣಿನ ಮುದ್ದೆ ಇದೆ, ಅಲ್ಲಿ ಮಣ್ಣಿನ ಮುದ್ದೆ ಇಲ್ಲ ಎಂದು ಹೀಗೆ ಸ್ಥಳವನ್ನು ಕಾಲವನ್ನು ಸೇರಿಸಿಕೊಂಡೇ ವ್ಯವಹರಿಸುತ್ತಾರೆ. ದೇಶ ಕಾಲಗಳನ್ನು ಸೇರಿಸದೆ ಸುಮ್ಮನೆ, "ಮಣ್ಣಿನ ಉಂಡೆ ಇಲ್ಲ" ಎನ್ನುವ ಪ್ರತೀತಿಯೋ ವ್ಯವಹಾರವೋ ಎಲ್ಲಿಯೂ ಕಾಣುವುದಿಲ್ಲ. "ಈಗ ಮೃತ್ಪಿಂಡವಿದೆ ಎಂದೋ" ಇಲ್ಲಿ ಮೃತ್ಪಿಂಡವಿದೆ ಎಂದೋ ಒಬ್ಬನು ವ್ಯವಹರಿಸಿದರೆ ಮಣ್ಣು ಎನ್ನುವ ದ್ರವ್ಯಕ್ಕೆ ಪಿಂಡತ್ವಾವಸ್ಥೆ ವಿಷಯ. ಈಗ ಮೃತ್ಪಿಂಡವಿಲ್ಲ 'ಎಂದೋ' 'ಇಲ್ಲಿ ಮೃತ್ಪಿಂಡವಿಲ್ಲ' ಎಂದೋ ವ್ಯವಹರಿಸಿದರೆ ಪಿಂಡಾವಸ್ಥೆಯು ನಾಶವಾಗಿರುವ ಘಟಾವಸ್ಥೆಯೇ ವಿಷಯ. ಆಗ ನಾಸ್ತಿತ್ವ ವ್ಯವಹಾರ ಮಾಡಿದರೂ ಕೂಡ ಬೇರೊಂದು ಆಕಾರದಿಂದ ಅಸ್ತಿತ್ವವೇ ಸ್ಪಷ್ಟವಾಗಿ ನಿಲ್ಲುತ್ತೆ ಎನ್ನುವುದನ್ನು ಸರ್ವಾನುಭವ ಸಾಕ್ಷಿಕವಾಗಿ ನೋಡಬಹುದು. ಇಂತಹ ವಸ್ತು ಇಲ್ಲಿ ಇಲ್ಲ ಎಂದರೆ ಮತ್ತೊಂದು ಸಮಯದಲ್ಲಿ ಉಂಟು ಎನ್ನುವುದು ನಿಶ್ಚಯವಾಗಿ ಬಿಡುತ್ತದೆ. ಆದ್ದರಿಂದಲೇ ಯಾವ ರೀತಿಯಿಂದಲೂ ಸರ್ವಶೂನ್ಯವಾದ ಸಿದ್ಧಿಸುವುದಿಲ್ಲ ಎಂದಾಯಿತು.

ಸೂತ್ರದ ಮೇಲೆ ಅರ್ಥವನ್ನು ನೋಡುವುದು. ಹೇಗೆಂದರೆ ಸರ್ವಥಾ ಸರ್ವಪ್ರಕಾರದಿಂದಲೂ ಅನುಪಪತ್ತೇ: ಸ್ವಾಭಿಮತವಾದ ಸರ್ವಶೂನ್ಯವಾದ ಉಪಪನ್ನವಾಗದೆ ಇರುವುದರಿಂದ ಎನ್ನುವಂತೆ, "ಸರ್ವಪ್ರಕಾರದಿಂದಲೂ ಎನ್ನುವುದನ್ನು ಶ್ರೀ ಭಾಷ್ಯದಲ್ಲಿ ಸ್ವಾಮಿ ರಾಮಾನುಜರು ವಿವರಿಸಿ ತಿಳಿಸುವಾಗ "ಸದಿತಿ ಪ್ರತಿಜ್ಞಾಯಾಮ್ ಅಸದಿತಿ ಪ್ರತಿಜ್ಞಾಯಾಂಚ" ಎಂದು ರಚಿಸುತ್ತಾರೆ, ಶಂಕರ ಭಾಷ್ಯದಲ್ಲಿ ಈ ವಿಧವಾದ ಅರ್ಥ ಮಾಡಲಾಗಲಿಲ್ಲ. "ದೇವದತ್ತ ಸರ್ವಥಾ ಆರೋಗ್ಯ!" "ಯಜ್ಞದತ್ತಃ ಸರ್ವಥಾ ಮೂರ್ಖ!" ಎಂದರೆ ಇದಕ್ಕೆ ಯಾವ ರೀತಿ ಅರ್ಥವನ್ನು ತೆಗೆದುಕೊಳ್ಳುತ್ತೇವೆಯೋ ಆ ರೀತಿಯಾಗಿಯೇ ಶಂಕರಾಚಾರ್ಯರು ಅರ್ಥಮಾಡಿದರು.

ಭಗವದ್ರಾಮಾನುಜರು ಮಾಡಿರುವ ಅರ್ಥವೇ ಸತ್ಯತೆಯುಳ್ಳ ಸಮಂಜಸವಾದದ್ದು. ರಾಮಾನುಜರಿಗೆ ಈ ಅರ್ಥ ತೋರಿದ್ದು ಯಾವುದರಿಂದರೆ, ತಿರುವಾಯ್ಮೊಳಿಯಲ್ಲಿ (1-9-9) "ಉಳನೆನಿಲುಳನ್ ಅವನುರುವ್ ಇವ್ವುರುಗಳ್, ಉಳನೆನ ಇಲನ್ ಎನವಿವೈ ಕುಣಮುಡೈಮೈಯಿಲ್ ಉಳ ನಿರುತಹೈಮೈಯೊಡು ಒಳಿವಿಲನ್ ಪರಂದೇ" ಎನ್ನುವ ಪಾಶುರದ ಆಧಾರದಿಂದಲೇ ಈ ಸೂತ್ರದ ಅರ್ಥವನ್ನು ಶ್ರೀರಾಮಾನುಜಾಚಾರ್ಯರು ನಿರ್ದಿಷ್ಟವಾಗಿ ಹೇಳಿದ್ದಾರೆನ್ನುವುದು ನಿಸ್ಸಂದೇಹ.

ಆ ಪಾಶುರದ (ಶ್ಲೋಕ) ಆರಾಯಿರಪ್ಪಡಿ ವ್ಯಾಖ್ಯಾನವನ್ನು ನೋಡಿದರೆ ಸುಲಭವಾಗಿ ತಿಳಿಯುತ್ತೆ. ಆ ಪದ್ಯ ತಮಿಳು ಭಾಷೆಯಲ್ಲಿ ಬರೆದಿರುವ ತಾತ್ಪರ್ಯವನ್ನೇ ಶ್ರೀ ಭಾಷ್ಯದಲ್ಲಿ ಸಂಸ್ಕೃತದಲ್ಲಿ ಬರೆದಿದೆ ಎನ್ನುವುದನ್ನು ವಿಶದವಾಗಿ ತೋರಿಸುತ್ತೇವೆ.

ತಿರುವಾಯ್ಮೊಳಿ ಸೂಕ್ತಿ —

ಉಳನೆನಿಲ್ ಉಳನ್ :
ಅವನುರುವಮ್ ಇವ್ವುರುವುಗಳ್ :
ಉಳನಲ ನೆನಿಲ್ ಅವನ್ :
ಅವನರುವಮ್ ಇವ್ವರುವುಗಳ್ :
ಇರುತಹೈಮೈಯೊಡು ಉಳನ್

ಶ್ರೀ ಭಾಷ್ಯ ಸೂಕ್ತಿ —

ಕಿಂ ಭವಾನ್ ಸರ್ವಂ ಸದಿತಿ ಪ್ರತಿಜಾನೀತೇ ?
(ತಥಾಸತಿ) ತವಾಭಿಪ್ರೇತಂ ತುಚ್ಛತ್ವಂ ನ ಸಂಭವತಿ
ಕಿಂ ಭವಾನ್ ಅಸದಿತಿ ಪ್ರತಿಜಾನೀತೇ ? (ತದಾಪಿ)
ತುಚ್ಛತ್ವಂ ನ ಸಂಭವತಿ ।
ಶೂನ್ಯಮಿತಿ ಪ್ರತಿಜಾನತೇ ಸದಿತಿ ಪ್ರತಿ
ಜ್ಞಾನಮೇವ ಸರ್ವಸ್ಯ ವಿದ್ಯಮಾನಸ್ಯ
ಅವಸ್ಥಾ ವಿಶೇಷ ಯೋಗಿತ್ವೇ ಅಪ್ರತಿಜ್ಞಾತಾ
ಭವತೀತಿ ತುಚ್ಛತಾನ ಕುತಶ್ಚಿದಪಿ
ಸಿದ್ಧ್ಯತಿ ।

ವೇದಾಂತ ದೀಪದಲ್ಲಿಯೂ ಸಾರದಲ್ಲಿಯು ಸಂಕ್ಷೇಪವಾಗಿ ಹೇಳಿರುವ ಸೂಕ್ತಿಗಳನ್ನು ನೋಡಿದರೂ ತಿರುಪ್ಪಾವೈವೊಳಿಗೆ ನೇರ ಹೊಂದಿಕೊಂಡಿರುವುದು ತಿಳಿದುಬರುತ್ತೆ. ಇತರೆ ಭಾಷ್ಯಕಾರರು ಈ ರೀತಿ ಸೂತ್ರವನ್ನು ನಿರ್ವಹಿಸಲಾರದೆ ಇದ್ದಿದ್ದು ದಿವ್ಯ ಪ್ರಬಂಧದಲ್ಲಿ ಪ್ರವೇಶವಿಲ್ಲದುದರಿಂದಲೇ ಎನ್ನುವುದನ್ನು ದೃಢವಾಗಿ ತಿಳಿಯತಕ್ಕದ್ದು.

# ಶ್ರೀ ವೇದಾಂತಾಚಾರ್ಯರು ದಿವ್ಯ ಪ್ರಬಂಧವು.

ಆಳ್ವಾರ್ಗಳ ದಿವ್ಯಪ್ರಬಂಧಗಳು ತಮಿಳು ಭಾಷೆಯಲ್ಲಿ ರಚಿಸಿರುವುದರಿಂದ ಸಂಸ್ಕೃತದಲ್ಲಿ ಪರಿಚಯವಿಲ್ಲದವರು ಮಾತ್ರ ದಿವ್ಯ ಪ್ರಬಂಧಗಳನ್ನು ನೋಡಿ ಕಾಲ ಕಳೆಯಬೇಕೆಂದು, ಸಂಸ್ಕೃತ ವಿದ್ವಾಂಸರಾಗಿರುವವರು ಉಪನಿಷತ್ತು ಮೊದಲಾದವುಗಳಿಂದಲೇ ಹೊತ್ತು ಕಳಿಯಬೇಕೆಂದೂ ಕೆಲವರು ಹೇಳುತ್ತಾರೆ. ಈ ವಿಷಯದಲ್ಲಿ ವೇದಾಂತಾಚಾರ್ಯರ ಮನಸ್ಸು ಹೇಗಿತ್ತೆಂದು ತಿಳಿಯೋಣ.

ಸಂಸ್ಕೃತ ಕ್ಷೀರಾಬ್ಧಿಯನ್ನು ತಮ್ಮ ವಾಣೀಮಂಥನದಿಂದ ಕಡೆದಿರುವವರು ವೇದಾಂತಾಚಾರ್ಯರು ಇವರಂತಹ ಸಂಸ್ಕೃತ ವಿದ್ವಾಂಸರು 'ನ ಭೂತೋ ನ ಭವಿಷ್ಯತಿ' ಎಂದರೆ ತಪ್ಪಾಗಲಾರದು-ವೇದಾಂತಗಳಿಗೆ ಉಪಬೃಂಹ್ಮಣವಾಗಿ ಇರುವ ಇತಿಹಾಸ ಪುರಾಣಾದಿಗಳು ಇವರಿಗೆ ವಾಚೋ ವಿಧೇಯ. ಸಹಕಾರಿ ಸಾಮಗ್ರಿಗಳಾದ ನ್ಯಾಯ ಮೀಮಾಂಸೆಗಳೂ ಇವರ ಮನಸ್ಸನ್ನು ಹಿಂಬಾಲಿಸುತ್ತದೆ. ಈ ರೀತಿ ವಾಣೀ ಸಾಮ್ರಾಜ್ಯ ಪಟ್ಟಾಭಿಷಿಕ್ತರಾದ ಇವರು ಹೇಳುವ ಒಂದು ಪಾಶುರ (ಶ್ಲೋಕ) ವನ್ನು ನೋಡೋಣ.

"ಪೊಯಿಗೈಮುನಿಪೂತತ್ತಾರ್ ಪೇಯಾಳ್ವಾರ್
ಕಣ್ಪೊರು ನಲ್ಲವೆರುಂ ಕುರುಕೇಶನ್ ವಿಟ್ಟುಚಿತ್ತನ್
ತುಯ್ಯಕುಲಶೇಖರನ್ ನಮ್ ಬಾಣನಾಥನ್
ತೊಂಡರಡಿಪ್ಪೊಡಿ ಮಳಿಶೈವಂದ ಜ್ಯೋತಿ
ವೈಯಮೆಲ್ಲಾಮ್ ಮರೈ ವಿಳಂಗ ವಾಳವೇಲೆಂದುಮ್
ಮಂಗೈಯರ್‌ಕೋನೆನ್ರಿವರ್‌ಗಳ ಮಹಿಳಂದು ಪಾಡುಮ್ ಶೆಯ್ಯ ತಮಿಳ್‌ಮಾಲೈ
ಗಳ್ ನಾಮ್ ತೆಳಿಯ ಮೋದಿತ್ತೆಳಿಯಾದ ಮರೈನಿಲಂಗಳ್ ತೆಳಿನಿನ್ರೋಮೇ ॥

ಇದು ವೇದಾಂತಾಚಾರ್ಯರ ಪ್ರಬಂಧಗಳಲ್ಲಿ ಒಂದಾದ ಅಧಿಕಾರ ಸಂಗ್ರಹದ ಮೊದಲ ಪದ್ಯ: ಸಂಸ್ಕೃತ ವೇದ ವೇದಾಂತಗಳಲ್ಲಿ ಎಷ್ಟು ಪರಿಶ್ರಮಪಟ್ಟರೂ ತಪಸ್ಪರ್ಶವಾದ ಜ್ಞಾನ ಅದರಿಂದ ಉಂಟಾಗದೆಂದೂ, ಆಳ್ವಾರ್ಗಳ ದಿವ್ಯ ಪ್ರಬಂಧಗಳಿಂದಲೇ ಜ್ಞಾನ ವಿಕಾಸವನ್ನು ಹೊಂದಬೇಕೆಂದೂ ಇದರಿಂದ ತೋರಿಸಲಾಯಿತು. ಇಲ್ಲಿ ಸಂಸ್ಕೃತ

ಶಾಸ್ತ್ರಗಳನ್ನು ಕುರಿತು ಹೇಳುವಲ್ಲಿ 'ತೆರಿಯಾದ ಮಾಲ್ಯೆ ನಿಲಂಗಳ್' ಎಂದು ಧೈರ್ಯದಿಂದ ಹೇಳಿರುವುದನ್ನು ನೋಡಬೇಕು.

ಇತಿಹಾಸ ಪುರಾಣಾದಿಗಳನ್ನು ತೆಗೆದುಕೊಂಡು ಉಪನಿಷತ್ತಿನ ತಾತ್ಪರ್ಯವನ್ನು ತಿಳಿಯುವುದಕ್ಕಿಂತಲೂ ಆಳ್ವಾರ್‌ಗಳ ಶ್ರೀ ಸೂಕ್ತಿಗಳಿಂದ ತಿಳಿಯುವುದೇ ಅತ್ಯಧಿಕ ಉತ್ತಮ ಎನ್ನುವ ಮನೋಭಾವವನ್ನು ದೃಢಪಡಿಸುವ

## ಸರ್ವೋಪನಿಷತ್ಸಾರೋಪದೇಷ್ಟಾರಂ

ಷತ್ ತಾತ್ಪರ್ಯ ರತ್ನಾವಳಿಯಲ್ಲಿಯೂ ನಿರೂಪಿಸಿರುತ್ತಾರೆ. ಅದರ ನಾಲ್ಕನೆಯ ಶ್ಲೋಕದಲ್ಲಿ (ಯತ್, ತತ್, ಕೃತ್ಯಮ್ ಶ್ರುತೀನಾಮ್ ಮುನಿಗಣವಿಹಿತೈಃ ಸೇತಿಹಾಸೈಃ ಪುರಾಣೈಃ ತತ್ರಾಸೌ ಸತ್ವ ಸೀಮಾ ಶಠಮಥನ ಮುನೇಃ ಸಂಹಿತಾ ಸಾರ್ವಭೌಮೀ) ಎಂದು ಹೇಳಿದೆ.

(ಇಲ್ಲಿ ಜಗದಾಚಾರ್ಯ ಸಿಂಹಾಸನಾಧಿಪತಿ ಪ್ರ. ಭ. ಅಣ್ಣಂಗರಾಚಾರ್ಯಸ್ವಾಮಿಯವರ ವ್ಯಾಖ್ಯಾನ ಕೇಳಕಂಡಂತೆ)

ಇತಿಹಾಸ ಪುರಾಣಗಳನ್ನು ತೆಗೆದುಕೊಂಡು ನಾವು ಯಾವ ಉಪಯೋಗವನ್ನು ಪಡೆಯುತ್ತೇವೆಯೋ ಆ ಉಪಯೋಗವೇ ತಿರುವಾಯ್ಮೊಳಿಯಲ್ಲಿಯೂ ಇದೆ. ಆದರೆ ಆ ಪುರಾಣಾದಿಗಳು ರಾಜಸಗಳಿಂದಲೂ ತಾಮಸಗಳಿಂದಲೂ ತ್ರಿಸ್ಕೃಗಳಾಗಿಯೂ ಆಗಿರುತ್ತೆ. ಇಲ್ಲಿ ಆ ರೀತಿ ಇಲ್ಲ. ಸತ್ವಗುಣಕ್ಕೆ ಸೀಮಾಭೂಮಿಯಾದ ಆಳ್ವಾರ್‌ಗಳಿಂದ ನುಡಿಯಲ್ಪಡುವುದರಿಂದ ಕೇವಲ ಸಾತ್ವಿಕವಾಗಿರುವ ಈ ತಿರುವಾಯ್ಮೊಳಿಯಾದ ದ್ರಾವಿಡ ಬ್ರಹ್ಮಸಂಹಿತೆಯಾದದ್ದು ವೇದೋಪಬೃಹ್ಮಣಗಳಲ್ಲಿ ಶ್ರೇಷ್ಠವಾಗಿದೆ.

ಶ್ರೀ ಆಳವಂದಾರು ಸ್ತೋತ್ರ ರತ್ನದಲ್ಲಿ 'ಮಾತಾಪಿತಾಯುವತಯಃ' ಎನ್ನುವ ಶ್ಲೋಕದಿಂದ ಆಳ್ವಾರನ್ನು ಅಪೇಕ್ಷಿಸಿದರು. ಅದೇ ಸ್ತೋತ್ರಭಾಷ್ಯದಲ್ಲಿ ಸ್ವಾಮಿ ದೇಶಿಕರು ರಚಿಸಿರುವ ಅವತಾರಿಕಾ ಶ್ರೀ ಸೂಕ್ತಿಗಳು ಆಸ್ತಿಕರುಗಳಿಂದ ಕಂಠಪಾಠ ಮಾಡತಕ್ಕದ್ದಾಗಿದೆ,

'ಅಥ ಪರಾಶರ ಪ್ರಬಂಧಾದಪಿ ವೇದಾಂತರಹಸ್ಯ ವೈಶದ್ಯಾತಿಶಯಂ ಹೇತುಂಭಿರೂತೇ।
ಸದ್ಯಃ ಪರಮಾತ್ಮನಿ ಚಿತ್ತರಂಜಕತಮೈಃ ಸರ್ವೋಪ ಜೀವ್ಯೈಃ ಉಪಬೃಹ್ಮಣೈಃ ಮಂಥರಕವಿ ಪ್ರಭೃತಿ
ಸಂಪ್ರದಾಯ ಪರಂಪರಯಾ ನಾಥಮುನೇರಪ್ಯುಪಕಾರಕಂ ಕಾಲವಿಪ್ರ ಕರ್ಷೇsಪಿ ಪರಮ ಪುರುಷ
"ಸಂಕಲ್ಪಾತ್, ಕದಾಚಿತ್, ಪ್ರಾದುರ್ಭೂತಯ ಸಾಕ್ಷಾದಪಿ ಸರ್ವೋಪನಿಷತಾರೋಪದೇಷ್ಟಾರಂ ಪರಾಂಕುಶಮುನಿಂ"
'ಮಾತಾಪಿತಾ ಭ್ರಾತ್ರಾತ್ಮತ್ಯಾದ್ಯುಪನಿಷತ್ಪ್ರಸಿದ್ಧ ಭಗವತ್ಪ್ರಭಾವ ಧೃಷ್ಟ್ಯಾ ಪ್ರಣಮತಿ–ಮಾತೇತಿ'

ಎನ್ನುವುದು ಅಲ್ಲಿರುವ ಶ್ರೀ ಸೂಕ್ತಿಗಳು ಶ್ರೀ ಪರಾಶರಮಹರ್ಷಿ ರಚಿಸಿರುವ ಶ್ರೀ ವಿಷ್ಣುಪುರಾಣಕ್ಕಿಂತಲೂ ವೇದಾಂತರಹಸ್ಯಾರ್ಥಗಳನ್ನು ಅಧಿಕ ಸರಳವಾಗಿ ತೋರಿಸುವುದು ಹತ್ತು ಆಳ್ವಾರ್‌ಗಳ ಪಾಶುರಗಳು ಎನ್ನುವುದು ಇಲ್ಲಿ ಸ್ಪಷ್ಟವಾಗಿ ಹೇಳಿರುವ ವಿಷಯ.

ಯತಿಶಿರಾಜ ಸಪ್ತತಿಯಲಿ ಶ್ರೀನಮ್ಮಾಳ್ವಾರನ್ನು ಕುರಿತು ಶ್ರೀ ದೇಶಿಕರು ಒಂದು ಶ್ಲೋಕವನ್ನು ರಚಿಸಿರುತ್ತಾರೆ ಯಥಾ ಶಠಾರಸ್ವಕವಮ್ ಶ್ರೋತ್ರೋಸಲಭಾವೋದ ವಾಸಿತವಮ್ ಶ್ರುತೀವನಾವಮ್ ವಿಶ್ರಮಾಯಾಲಕಮ್ - ಶಠಾರಿಮ್ ತಮುಪಾಸ್ಮಹೇ " ಎನ್ನುವುದು ಇದರ ತಾತ್ಪರ್ಯ ಏನೆಂದರೆ, ಸಂಸ್ಕೃತ ವೇದಗಳು ತತ್ವಹಿತ ಪುರುಷಾರ್ಥಗಳನ್ನು ಪ್ರಕಟಪಡಿಸಬೇಕೆಂದು ಬಹಳ ಶ್ರಮಪಟ್ಟಿತು. ಆದರೆ ಶ್ರಮಕ್ಕೆ ತಕ್ಕ ಹಾಗೆ ಫಲವು ದೊರೆಯಲಿಲ್ಲ. ಅಲ್ಲಹೇ ! ನಮಗೆ ಶ್ರಮವು ಮಾತ್ರ ಉಳಿಯಿತು ! " ಎಂದು ಆ ವೇದಗಳು ಪರಿತಾಪ ಪಟ್ಟವು. ಆ ಸ್ಥಿತಿಯಲ್ಲಿ ವಕುಳಾ ಭರಣ ಭೂಷಿತರಾದ ಆಳ್ವಾರು ಅವತರಿಸಿ ತಿರಡು ಸರಣಿಗಳನ್ನು ಸಮನ್ವಯ ಗೊಳಿಸಿದರು ವೇದಗಳಿಗೆ ಉದ್ದೇಶವಾದ ಅರ್ಥಗಳನ್ನು ಸ ಷ್ಟ ವಾಗಿ ಪ್ರಕಾಶಪಡಿಸಿದ್ದರಿಂದ, ವೇದಗಳಿಗೆ ಉಂಟಾಗಿದ್ದ ತೃಷೆ ನೀಗಿತಂತೆ. ಎನ್ನುವುದು ಅಲ್ಲದೆ ಭಗವತ್ಸ್ವರೂಪಗುಣ ವಿಭೂತಿಗಳನ್ನು ಪ್ರತಿಪಾದಿಸುವ ವಿಷಯದಲ್ಲಿ ವೇದಗಳೇ ! ನೀವುಗಳು ಏಕೆ ವ್ಯರ್ಥವಾಗಿ ಶ್ರಮ ಪಡುತ್ತೀರಿ ? ಆ ಕಾರ್ಯವನ್ನು ನಾನು ವಹಿಸಿಕೊಳ್ಳುವೆ ನೀವು ಶ್ರಮ ನಿವಾರಣೆ ಮಾಡಿಕೊಳ್ಳಿ: ಎಂದು ಹೇಳಿ ಆಳ್ವಾರರು ದಿವ್ಯಪ್ರಬಂಧವನ್ನು ಅನುಗ್ರಹಿಸಿದರು. ಎಂದು ತಾತ್ಪರ್ಯವಾಗುತ್ತೆ. ಮತ್ತು ಗಂಭೀರವಾದ ಶ್ರೀ ವೇದಾಂತಾಚಾರ್ಯರ ಸೂಕ್ತಿಗಳಲ್ಲಿ ಇನ್ನೂ ಎಷ್ಟೋ ವಿಶೇಷ ತಾತ್ಪರ್ಯಗಳನ್ನು ಅವಗಾಹಿಸಬಹುದು.

ಇನ್ನು ಪಾದುಕಾ ಸಹಸ್ರದಲಿ ಆಳ್ವಾರ್ ವಿಷಯವಾಗಿ ಹೇಳಿರುವ ಶ್ರೀ ಸೂಕ್ತಿಗಳನ್ನು ಅನ್ವೇಷಣೆ ಮಾಡ ಹೊರಟರೆ ಆಳ್ವಾರ್ ಸೂಕ್ತಿಗಳನ್ನು ಅನುಸಂಧಾನ ಮಾಡಿದ ಬಾಯಿನಿಂದ ಮತ್ತೊಂದು ಸರಸ್ವತಿಯನ್ನು ಹೇಳಲು ಸಂಕೋಚಪಡುವಂತೆ ದಿವ್ಯಪ್ರಬಂಧಗಳಿಗೆ ಅಷ್ಟೊಂದು ಹಿರಿಮೆಯನ್ನು ಹೇಳಿದೆ. ಆದರಿಂದ ಒಂದೆರಡು ಶ್ಲೋಕಗಳನ್ನು ಮಾತ್ರವೇ ಪ್ರ. ಭ. ಜಗದಾಚಾರ್ಯ ಸಿಂಹಾಸನಾಧಿಪತಿಗಳಾದ ಅಣ್ಣಂಗರಾಚಾರ್ಯರು ತೋರಿಸಿರುತ್ತಾರೆ.

ವಿಂಧ್ಯಸ್ತಂಭಾದವಿಹತಗತೇರ್ವಶ್ಯಗಾಚಾಂತ ಸಿಂಧೋಃ
ಕಿಂಭೀ ಸೂನೋಃ ಅಸುರಕ ಬಲಗ್ರಾಸಿನಃ ಸ್ವೈರಭಾಷಾ !
ನಿತ್ಯಂ ಜಾತಾ ಶಠರಿಪುತನೋಃ ನಿಷ್ಪತಂತೀ ಮುಖಾಂತ್ತೇ ನಿಷ್ಪತಂ
ಪ್ರಾಚೀನಾನಾಂ ಶ್ರುತಿಪರಿಷದಾಂ ಪಾದುಕೇ ಪೂರ್ವ ಗಣ್ಯಾ ॥ (29)

ಎನ್ನುವ ಶ್ಲೋಕ ಶ್ರೀವೈಷ್ಣವರುಗಳಿಗೆ ನಿತ್ಯ ಅನುಸಂಧಾನ ಮಾಡಬೇಕು; ಅನೇಕ ತರಹ ಹಿರಿಮೆಗಳುಳ್ಳ ಅಗಸ್ತ್ಯಮುನಿಯಿಂದ ಹುಟ್ಟಿರುವ ಈ ತಮಿಳುಭಾಷೆ ಶ್ರೀನಮ್ಮಾಳ್ವಾರಿಂದ ತಿರುವಾಯ್‌ಮೊಳಿಯಾಗಿ ಅವತರಿಸಿದ್ದಾಗಿ ಸಂಸ್ಕೃತವೇದಕ್ಕಿಂತಲೂ ಹಿರಿಮೆಯುಳ್ಳದ್ದಾಗಿರುತ್ತೆ – ಎಂದು ಇದರಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿರುತ್ತೆ. "ಸರ್ವೋಪ ಜೀವ್ಯತಯಾ; ದ್ವಾರಾಂತರಾನಪೇಕ್ಷಿಣೇನ ಭಗವತ್ಸ್ವರೂಪ ಪ್ರಕಾಶಕತ್ವಾಚ್ಚ, ದ್ರಾವಿಡ ಬ್ರಹ್ಮಸಂಹಿತಾ ಪುರಾತನ ಶ್ರುತ್ಯಪೇಕ್ಷಯಾಪಿ ಸ್ವಪ್ಪಾ ಸೀದಿತಿ ಯಾವತ್, ಅತಏವೋತ್ಸವಾದಿಷು ಭಗವತೋಽಗ್ರಭಾಗೇ ದ್ರಮಿಡೋಪ ನಿಷದಧ್ಯಯನಮ್ ॥

ನಿಷನ್ನಿವೇಶಶೂನ್ಯಾನ್

ವ್ಯಾಖ್ಯಾನ ಕರ್ತರುಗಳು – ದ್ರವಿಡೋಪನ್ನಿವೇಶಶೂನ್ಯಾನ್ (22) ಎನ್ನುವ ಶ್ಲೋಕವೂ.

ದಿವ್ಯ ಪ್ರಬಂಧಾಧ್ಯಯನವೋ. ಆಳ್ವಾರ್ ಶ್ರೀ ಶಠಗೋಪರೆ ಶುಭನಾಮವನ್ನು ಧರಿಸುವ ಭಗವತ್ ಪಾದುಕಾ ಧಾರಣವೋ ಇಲ್ಲದಿದ್ದವರಿಗೆ ಭಗವತ್ಕೃಪೆ ದೊರೆಯಲಾರದೆಂಬ (ಮೋಕ್ಷವು ದುರ್ಲಭವೆಂದು) ಸತ್ಯವನ್ನು ಪ್ರಕಟಪಡಿಸುತ್ತಾರೆ.

ದಿವ್ಯ ಪ್ರಬಂಧಗಳ ಹಿರಿಮೆ ಶ್ರೀ ವೇದಾಂತಾಚಾರ್ಯರ ಹೃದಯದಲ್ಲಿ ಎಡಬಿಡದೆ ಬೇರು ಬಿಟ್ಟಿತ್ತೆಂದು ಚೆನ್ನಾಗಿ ಕಂಡು ಬರುತ್ತೆ. 'ಅಮೃತಾಸ್ವಾದಿನೀ' ಎನ್ನುವ ದೇಶಿಕಪ್ರಬಂಧದಲ್ಲಿ "ಅಂದಮಿಲಾಪೇರಿನವರ್ ಅರಿಂದ ವೇಕ್ಕುವರ್ ಅಡಿಯೇಂ ಮೈಯರುವಿವೃಡನೇಯೆನ್ರುಂ ಕಾತ್ತು, ವಂದೆನ್ನೈ ನಿರೈವಳಾಯಿಲ್ ಒಳುಂಗಾದಮ್ಮಾ ಮನ್ನಿಲೈಯಾನ್ ದೇಶಿಕರ್ತವರ್ ಮನ್ನೇಶಿಕನನ್ನು ವಂತಿರವರ್ ಮಂತಿರತ್ತಿನ್‌ವಳಿಯರಂಕಾಟ್ಟಿ ವಳಾಪಡಿತ್ತಿ ದಾನೇತ್ತಿವಡಿಪ್ಪ ಕೊಳ್ಳ, ಶಂದೈ ಏನ್ ನಿನ್ರುತನಿತ್ತಿರುವಮಾಟ್ ತಾಳಿಲ್ ತಲ್ಯೆವೈತ್ತೊತ್ತುಗೋಮನರುಳಿನಾಲೆ " (28) ಎನ್ನುವ ಒಂದು ಪಾಶುರವೇ (ಶ್ಲೋಕ) ಸಾಕು, ಅಲ್ಲಲ್ಲಿ ಆಕರ್ಷಣೆಯಾಗಿ ಹೇಳಿರುವ (1) "ಅಣಿಕಂರುಕ್ಕೈ ನಗರಮುನಿವರ್ ನಾವುಕ್ಕ ಅಮ್ಮೆಂದ್ವಿನನ......... ವಿಡಲರಿಯ ಪೆರಿಯ ಪೆರುಮಾಳ್‌ವೆಯರ್ ಪದಂಗಳೇ" (2) ಕುರುಕ್ಕೈಯಿಲ್ ವೆಂಚು ಕೊಳುಪ್ಪಡಕ್ಕಿಯ ಕುಲಪತಿ ತಂದ ಕುರಿಪ್ಪಿಲ್ ವೈತ್ತನರ್ " ಇತ್ಯಾದಿ ಪಾಶುರಗಳು ಆಳ್ವಾರ ಹತ್ತಿರದಲ್ಲೂ ದಿವ್ಯಪ್ರಬಂಧಗಳಲ್ಲಿಯೂ ಇರುವ ಭಕ್ತಿಯ ಮೂರ್ತಿಮತ್ತಾದ ದೇಶಿಕರಾಗಿ ಅವತರಿಸಿರುವರಲ್ಲವೇ ! ಎನ್ನುವಂತೆ ಇದೆ! ಹೊರತು ಮತ್ತೇನನ್ನೂ ಹೇಳಬಾರದು. ಸ್ವಾಮಿ ದೇಶಿಕರು ತಮ್ಮನ್ನು ವಿಶೇಷಿಸಿಕೊಳ್ಳುವ ಸ್ಥಳದಲ್ಲಿಯೂ "ಶಂದಮಿಹುತಮಿಳ್ಮರೈಯೋನ್ ತೂಪ್ಪುಲ್ ತೋನ್ರುಮ್ ವೇದಾಂತಗುರು" ಎಂದು ದ್ರಾವಿಡ ಸಂಹಿತೆಗಾಗಿಯೇ ತಾವು ಹುಟ್ಟಿದ್ದಾಗಿ ತಿಳಿಸಿರುತ್ತಾರೆ ಶ್ರೀ ವೇದಾಂತಾಚಾರ್ಯರನ್ನು ಮಂಗಳಾಶಾಸನ ಮಾಡುವವರೂ ಸಹ "ಶನ್ನಮಿಳ್‌ತೂಪ್ಪುಲ್ ತಿರುವೇಂಗಡವನ್ ವಾಳ್ಗಿಯೇ " ಎನ್ನುತ್ತಾರೆ ಸ್ವಾಮಿ ದೇಶಿಕರು ತಾವು ಮಂಗಳಾಶಾಸನ ಹೇಳುವುದು ತೊಂಡೈ ಮಂಡಲ ವೇದಿಯರ್ ವಾಳವೇತುಯ್ತನ್‌ಮರೈ ಪಲ್ಲವರ್ ವಾಳ್ಗವೇ" ಎಂದು ತಮಿಳು ವೇದವನ್ನು ತಿಳಿದ ರೀತಿಯಾಗಿ, . .

ಈ ರೀತಿ ಅಭಿನಿವೇಶ ಶ್ರೀ ವೇದಾಂತಾಚಾರ್ಯರಿಗೆ ಉಂಟಾದದ್ದು, ಎರಡು ಕಾರಣಗಳಿಂದ ಶ್ರೀ ನಾಥಮುನಿಗಳು ಆಳವಂದಾರ್, ರಾಮಾನುಜರು ಆಳವಾನ್ ಭಟ್ಟರು ಮೊದಲಾದ ಪೂರ್ವಾಚಾರ್ಯರ ಗಳೆಲ್ಲರೂ ಏಕಕಂಠರಾಗಿ ಆಳ್ವಾರ್‌ಗಳ ಶ್ರೀ ಸೂಕ್ತಿಯನ್ನೇ ಕ್ಷೇಮ ನಿಧಿಯಾಗಿ ತೆಗೆದುಕೊಂಡಿದ್ದರೆಂಬುದು ಒಂದು ಕಾರಣ. ಅವುಗಳಲ್ಲಿ ತಾವು ಕಂಡ ಅತಿಶಯವಾದ ಗುಣಾತಿಶಯಗಳು ಮತ್ತೊಂದು ಕಾರಣ.
"ಪ್ರಿಯಾತು ಸೀತಾ ರಾಮಸ್ಯದಾರಾಃ ಪಿತೃಕೃತಾ ಇತಿ, ಗುಣಾತ್ ರೂಪಗುಣಾಚ್ಚಾಪಿ ಪ್ರೀತಿಃ ಭೂಯೋ ಅಭ್ಯವರ್ಧತ" ಎನ್ನುವಂತೆ,

ಇಂತಹ ಮಹಾಚಾರ್ಯರ ಚರಣಾರವಿಂದಗಳಲ್ಲಿ ನಾವು ಭಕ್ತಿಯನ್ನು ಇಡುವುದು ಲಕ್ಷಣ. ದಿವ್ಯ ಪ್ರಬಂಧಗಳನ್ನು ಅಕ್ಷರ ಅಕ್ಷರವಾಗಿ ಕಲಿಯಬೇಕು. ಮತ್ತು ಅನೇಕ ರೀತಿಯಲ್ಲಿ ಆಚಾರ್ಯ ಭಕ್ತಿಯನ್ನು ತೋರಿಸಬಹುದಾದರೂ ಈ ಮಾರ್ಗದಲ್ಲಿ ತೋರಿಸುವುದು ಸರ್ವಶ್ರೇಷ್ಠವಾಗಿರುತ್ತೆ.

# ಭಗವದ್ ರಾಮಾನುಜರೂ - ವರದರಾಜಸ್ವಾಮಿಯು

1. ಪ್ರಬಂಧಗಳಲ್ಲಿ ಶ್ರೇಷ್ಠರಾದ ರಾಮಾನುಜರು ಪ್ರಮಾಣಗಳನ್ನೆಲ್ಲಾ ಪರಿಷ್ಕರಿಸಿದಂತೆಯೇ ಪ್ರಮೇಯ ಶ್ರೇಷ್ಠನಾದ ಭಗವಂತನ ದಿವ್ಯದೇಶಗಳನ್ನೂ ಅತ್ಯಧಿಕ ಪರಿಷ್ಕರಿಸಿ ಅನುಗ್ರಹಿಸಿರುತ್ತಾರೆ. ಆದ್ದರಿಂದಲೇ ಸ್ವಾಮಿಯವರ ಶ್ರೇಷ್ಠ ದಿನದ ಹಾಡಿನಲ್ಲಿ "ಪನ್ನಿಯ ತೆನ್ನರಂಗಾಪುರಿ ಮಾಮಲೈ ಮತ್ತು ನುಂಪಂದಿಡೇನಾಳ್" ಎಂದು ಮಣವಾಳ

ಮಹಾಮುನಿಗಳಿಂದ ಪ್ರಕಟಿಸಲ್ಪಟ್ಟಿತು. ಶ್ರೀರಂಗ, ತಿರುಪತಿ, ಕಾಂಚೀಪುರ ಮತ್ತು ತಿರುನಾರಾಯಣಪುರ ಮೊದಲಾದ ಸಕಲ ದಿವ್ಯದೇಶಗಳನ್ನು ಪರಿಷ್ಕರಿಸಿ ಅನುಗ್ರಹಿಸಿದವರು ಭಗವದ್ರಾಮಾನುಜಾಚಾರ್ಯರೊಬ್ಬರೇ ಆಗಿರುತ್ತಾರೆ. ಸಕಲ ದಿವ್ಯ ದೇಶದ ಅರ್ಚಾಮೂರ್ತಿಗಳಲ್ಲಿಯೂ ಭಕ್ತಿಯುಳ್ಳವರಾದರೂ ಕಾಂಚೀಪುರದ ವರದರಾಜರ ಚರಣಾರವಿಂದಗಳಲ್ಲಿ ಅಸಾಧಾರಣವಾದ ಅಭಿಮಾನವನ್ನಿಟ್ಟಿದ್ದರೆನ್ನುವುದನ್ನು ರಾಮಾನುಜ ನೂತ್ತಂದಾದಿಯಲ್ಲಿ "ಅಂಡಂಹಳ್‌ನಾಳ್ ತಿಂಗೆ ಳಾಯಿರ್....... ....... ಕಾಣಿಕಹು ಉಕೋಳ್ ಅಣ್ಣಲ್ ತೆನ್ನತ್ತಿಯೂರರ್ ಕಧಿಲ್ ಇಣೈಕ್ಕೀಳ್ ವೂಣ್ಡವನ್ಪಾಳನ್ ಇರಾಮಾನಂಶನ್'' ಎನ್ನುವ ಪಾಶುರದಿಂದ ವ್ಯಕ್ತವಾಗುತ್ತೆ.

ಶ್ರೀ ಹಸ್ತಿಶೈಲ ಪಾರಿಜಾತವಾದ ದೇವರಾಜನ ದಿವ್ಯನಾಮವೇ " ತೆನ್ನತ್ತಿಯೂರರ್ '' ಎನ್ನುವುದು. "ಉಲಕೇತ್ತಿ ಮೂಳಿಯಾನತ್ತಿ ಯೂರಾನ್'' ಎಂದು ಪೂತತ್ತಾಳ್‌ವಾರ್‌ರವರು ಹೇಳಿರುವುದನ್ನು ಅನುಸರಿಸಿ ಅವರಿದ ನಾರರು ಅತ್ತಿಯೂರ್ ಎಂದು ನುಡಿದರು.

2. ರಾಮಾನುಜರಿಗೆ ವರದರಾಜರ ಚರಣಾರವಿಂದಗಳಲ್ಲಿ ಪ್ರೇಮ ಅಧಿಕವಾಗಿರಲು ಕೆಲವು ಕಾರಣಗಳಿವೆ. ಶ್ರೀರಂಗದ ವೇದಸ್ಥಾನದಲ್ಲಿ ಶ್ರೀ ವೈಷ್ಣವ ಪುರಂದರರಾಗಿ ಬಾಳಿದ ಆಳವಂದಾರ್ರವರು ಕಾಂಚೀಪುರದಲ್ಲಿರುವ ರಾಮಾನುಜರ ಪ್ರಭಾವವನ್ನು ಕೇಳಿ ಇವರನ್ನು ಕಾಣಬೇಕೆಂಬ ಆತುರದಿಂದ ಕಾಂಚೀಪುರಕ್ಕೆ ದಯಮಾಡಿಸಿ ಶ್ರೀಹಸ್ತಿಗಿರಿಯಲ್ಲಿ ಮಂಗಳಾ ಶಾಸನಮಾಡಿ ಹತ್ತದ ಹತ್ತಿರ ತಿರು ಆನಂದಾಳ್ವಾನನ್ನು, ಕರಿಯಮಾಣಿಕ್ಕ ಪೆರುಮಾಳನ್ನು ದರ್ಶನಮಾಡಿ ಆ ಸ್ಥಳವನ್ನು ಪ್ರದಕ್ಷಿಣೆ ಮಾಡಿಕೊಂಡು ಬರುವಾಗ ಆಳವಂದಾರ್ರವರು ತಮ್ಮ ಪಕ್ಕದಲ್ಲಿದ್ದ "ತಿರುಕುಚ್ಚಿನಂಬಿಕೆ" ಯನ್ನು ನೋಡಿ ಈ ಗುಂಪಿನಲ್ಲಿ ಇಳೈಯಾಳ್‌ವಾರ್ ಯಾರು ? ಎಂದು ಕೇಳಿದರು. ಅದಕ್ಕೆ ಅವರು ಆಗೋಹೃಷ್ಟಪುಷ್ಟರಾಗಿ ಆಜಾನುಬಾಹುವಾಗಿ ಬರುತ್ತಿರುವವರು ಎಂದು ತೋರಿಸಿದರು. ಯಾಮುನಾರ್ಯರೂ ಸಹ ಮನಃಪೂರ್ವಕವಾಗಿ ಆನಂದದಿಂದ ನೋಡಿ "ಆ ಮೊದಲ್ವನಿವನ್'' ಎಂದು ವಿಶೇಷ ಕಟಾಕ್ಷ ವೀಕ್ಷಣದಿಂದ ಅನುಗ್ರಹಿಸಿದರು. ಅನಂತರ ದೇವರಾಜನಾದ ವರದನನ್ನು "ಯಸ್ಯ ಪ್ರಸಾದ ಕಲಯಾ ಬಧಿರಃ ಶೃಣೋತಿ ಪಂಗುಃ ಪ್ರಧಾವತಿ ಜವೇನ ಚ ವಕ್ತಿ ಮೂಕಃ, ಅಂಧಃ ಪ್ರಪಶ್ಯತಿ ಸುತಮ್ ಲಭತೇಚ ವಂಧ್ಯಾ ತಮ್ ದೇವಮೇವ ವರದಮ್ ಶರಣಂಗತೋಸ್ಮಿ'' ಎನ್ನುವ ಶ್ಲೋಕದಿಂದ ಶ್ರೀ ರಾಮಾನುಜರು ನಮ್ಮ ದರ್ಶನ ಸಂಸ್ಥಾಪಕರಾಗುವಂತೆ ಅನುಗ್ರಹಿಸು ಎಂದು ಶರಣಾಗತಿ ಮಾಡಿದ ರೆಂದು ಚರಿತ್ರೆ. ಆದ್ದರಿಂದ, ಶ್ರೀ ವರದರಾಜ ಸ್ವಾಮಿಯ ಅನುಗ್ರಹದಿಂದಲೇ ರಾಮಾನುಜರು ವಿಶೇಷ ಅಭಿವೃದ್ಧಿ ಹೊಂದಿದರು.

ಯಾದವ ಪ್ರಕಾಶರ ಗಂಗಾಯಾತ್ರೆಯಲ್ಲಿ ರಾಮಾನುಜರೂ ಸೇರಿ ಹೋಗುತ್ತಿರುವಲ್ಲಿ ವಿಂಧ್ಯಾಟವಿಯಲ್ಲಿ ನಿರ್ಜಲವೂ ನಿರ್ಜನವೂ ಆದ ಘೋರಾರಣ್ಯದಲ್ಲಿ ಎಲ್ಲರಿಂದಲೂ ಬೇರೆಯಾಗಿ ಹಿಂತಿರುಗಬೇಕಾದಾಗ ಯಾರು ಜೊತೆ ಯಾಗುತ್ತಾರೆಂದು ಅಲೆ ಅಲೆಯಾಗಿ ಏಳುವ ಸಮುದ್ರದಲ್ಲಿ ಏನು ಗತಿ ಎಂದು ದಿಕ್ಕೆಟ್ಟು ನಿಂತಾಗ ವರದರಾಜನು ಒಬ್ಬ ಬೇಡರವನ ಹಾಗೆಯೂ ಪೆರುಂದೇವಿತಾಯಾರು ಆವನ ಪತ್ನಿಯಂತೆಯೂ ವೇಷವನ್ನು ಧರಿಸಿ ರಾಮಾನುಜರಿಗೆ ಜೊತೆ ಯಾಗಿ ಬಂದು ದಾರಿ ಸಾಗುತ್ತಾ, ಒಂದೇ ರಾತ್ರಿಯಲ್ಲಿ ಕಾಂಚೀಪುರದ ಸರಹದ್ದಿಗೆ ಸೇರಿ ಶಾಲಕಿರಣರು ಎನ್ನುವ ಬಾವಿ ಯಿಂದ ನೀರು ತರಿಸಿ ಕುಡಿದು ದಾಹವಡಗಿಸಿಕೊಂಡದ್ದು ಮೊದಲು ತಾವು ಪ್ರತಿದಿನವೂ ಅದೇ ಶಾಲಕಿಣತ್ತಿನಿಂದ ಭಗವಂತನಿಗೆ ರಾಮಾನುಜರು ತೀರ್ಥವನ್ನು ಸಮರ್ಪಿಸುತ್ತಿದ್ದರು. ಈ ಇತಿಹಾಸವನ್ನು ಶ್ರೀ ವೇದಾಂತಾಚಾರ್ಯರು ಸಹ ಯತಿರಾಜ ವಿಂಶತಿಯಲ್ಲಿ 'ವಂದೇ ತಮ್ ಯಮಿನಾಮ್ ದುರಂಧರ ಮಹಮ್' ಎನ್ನುವ ಶ್ಲೋಕದಲ್ಲಿ 'ತತ್ತಮ್ ಯೇನ ದಯಾಸುಧಾಂಬು ನಿಧಿನಾ ಪೀತ್ವಾ ವಿಶುದ್ಧಮ್ ಪಯಃ ಕಾಲೇ ನಃ ಕರಿಶೈಲ ಕೃಷ್ಣ ಜಲದಧಃ ಕಾಂಕ್ಷಾದಿಕಮ್ ವರ್ಷತಿ' ಎನ್ನುವ ಉತ್ತರಾರ್ಧದಿಂದ ಪ್ರಕಟಿಸಿರುತ್ತಾರೆ.

ತಿರುಕಚ್ಚಿನಂಬಿ ಮೂಲಕವಾಗಿ ರಾಮಾನುಜಾಚಾರ್ಯರು ಭಗವಂತನ ಹತ್ತಿರ ಆರು ಮಾತುಗಳನ್ನು ಕೇಳಿ ಪ್ರಸನ್ನರಾದದ್ದು ಹಾಗೂ ವರದರಾಜರ ಸಾನಿಧ್ಯದಲ್ಲಿಯೇ ಯಜ್ಞಮೂರ್ತಿ ಎನ್ನುವ ಮಾಯಾವಾದಿ ಸನ್ಯಾಸಿಯು ಪ್ರಶ್ನೆಗೆಲ್ಲಾ ಉತ್ತರ ಕೊಡುತ್ತಾ ಬರುವಲ್ಲಿ ಅಂತ್ಯದಲ್ಲಿ ಒಂದು ಪ್ರಶ್ನೆಗೆ ಆ ಕ್ಷಣದಲ್ಲಿಯೇ ಉತ್ತರ ಕೊಡಲಾಗದೆ ಮಲಗಿ ನಿದ್ರಿಸುತ್ತಿರುವಾಗ ಕನಸಿನಲ್ಲಿ ಬಂದು ಸಾಕ್ಷಾತ್ಕಾರ ನೀಡಿ ಮಾಯಾವಾದಿಗಳ ಬಾಯಿ ಮುಚ್ಚಿಸುವಂತಹ ಕೆಲವು ಅರ್ಥವಿಶೇಷಗಳನ್ನು ಸ್ಫುರಿಸಲು ರಾಮಾನುಜರು ಜಾಗೃತರಾಗಿ ಆ ಯಜ್ಞಮೂರ್ತಿಯನ್ನು ಉಜ್ಜೀವನಗೊಳಿಸಿ ಅವನನ್ನೂ ಕೈಂಕರ್ಯಕ್ಕೆ ಸೇರಿಸಿಕೊಂಡರು. ಇದೂ ವರದರಾಜನ ಪ್ರಸಾದ ರೂಪವಾಗಿಯೇ ಪಡೆದ ಉಪಕಾರ ಸ್ಮೃತಿ. ಪ್ರಪಂಚಕ್ಕೇ ವೇದ್ಯಂ ವೇದ್ಯವಾಗುವ ಹಾಗೆ "ಅರುಳಾಳ್ ಪ್ಪೆರುಮಾನ್ ಎಂಪ್ಪೆರುಮಾನಾರ್" ಎನ್ನುವ ಅವರು ಇಷ್ಟಪಟ್ಟ ಹೆಸರನ್ನೇ ಅನುಗ್ರಹಿಸಿದರು.

ಈ ರೀತಿಯಾದ ಇತಿಹಾಸದಿಂದ ಶ್ರೀ ಭಗವದ್ರಾಮಾನುಜ ಸ್ವಾಮಿಯ ಚರಣಾರವಿಂದಗಳಲ್ಲಿ ಅತ್ಯಧಿಕ ಪ್ರೇಮದಿಂದ ಪ್ರಕಾಶಿಸಿದರೆಂಬುದನ್ನು ತಿಳಿಯಬಹುದು.

## ಶ್ರೀ ರಾಮಾನುಜರು--ಶ್ರೀ ನಾರಾಯಣಸ್ವಾಮಿ (ಮೇಲುಕೋಟೆ)

**ಶ್ರೀ॥ ವಿ. ಟಿ. ತಿರುನಾರಾಯಣಾಯ್ಯಂಗಾರ್ಯಸ್ವಾಮಿಯವರ ಉಪನ್ಯಾಸದಿಂದ ಸಂಗ್ರಹಿಸಿದ್ದು.**

ಭೂಮಂಡಲದಲ್ಲಿ ಶ್ರೀರಾಮಾನುಜರ ಬಾಳಿನ ಕಾಲವನ್ನು ಅಸಮಾನವಾದ ರೀತಿಯಲ್ಲಿ ನಿರ್ದೇಶನ ಮಾಡಿದೆ. ಅವರ ಅವತಾರ ಕಾಲ "ಧೀರ್ಮೋಲಬ್ಧಾ ;" ಎಂದು ಹೆಸರು ಪಡೆದಿದೆ. ಧರ್ಮೋರಬ್ಧಃ, ನಷ್ಟಃ, ಎಂಬುದು ಅವರ ನಿರ್ಯಾಣ ಸಮಯ ಅವರ ಆವಿರ್ಭಾವದಿಂದ ಜ್ಞಾನಲಾಭ ದೊರಕಿತೆಂದೂ ಅವರು ಕಣ್ಮರೆಯಾದ ಸಮಯ ಧರ್ಮವು ಕಣ್ಮರೆಯಾಯಿತೆಂದೂ ತತ್ವ ರಹಸ್ಯವನ್ನು ಬಲ್ಲ ಮಹರ್ಷಿಗಳು ಅಭಿಪ್ರಾಯಪಟ್ಟರು. ವರ್ಣ ಸಂಖ್ಯೆ ವಿಪರೀತ ಕ್ರಮದಲ್ಲಿ ಕಾಲ ಸಂಖ್ಯೆಯನ್ನು ಗುರುತಿಸುವ ಕ್ರಮವನ್ನು ಅನುಸರಿಸಿ ಅವರ ಜೀವಿತಕಾಲವನ್ನು ಶಾಲೀವಾಹನಶಕೆಯ ಆಧಾರದ ಮೇಲೆ ನಿರ್ಣಯಿಸಲಾಗಿದೆ.

"ಧೀರಲಬ್ಧಾ" 'ಧರ್ಮೋನಷ್ಟಃ' ಎಂಬ ವಾಕ್ಯಗಳಲ್ಲಿ ತೋರಿಬರುವ ಅಕ್ಷರಗಳು ಧ, ಲ, ಮ, ಮತ್ತು ಟ. "ಕ" ವರ್ಗದಿಂದ ಎಣಿಸಲು ತೊಡಗಿದರೆ 'ಚ' ವರ್ಗಾಂತಕ್ಕೆ ಹತ್ತು ವರ್ಣಗಳು, 'ತ" ವರ್ಗಾಂತಕ್ಕೆ ಹತ್ತು ವರ್ಣಗಳು 'ಪ' ವರ್ಗಾಂತಕ್ಕೆ ಐದು, ಮತ್ತು 'ಅ' ವರ್ಗೀಯಾಂತಕ್ಕೆ ಒಂಬತ್ತು ಸಂಖ್ಯೆಯಾಗುತ್ತವೆ. ಅಂದಮೇಲೆ ಧ ಕಾರಕ್ಕೆ ಒಂಬತ್ತು, "ಮ" ಕಾರಕ್ಕೆ ಐದು 'ನ" ಕಾರಕ್ಕೆ ಶೂನ್ಯ, "ಟ' ಕಾರಕ್ಕೆ ಒಂದು 'ಲ' ಕಾರಕ್ಕೆ ಮೂರು ಎಂದು ಸಂಖ್ಯೆ ಏರ್ಪಡುತ್ತದೆ.

ಧೀರ್ಲಬ್ಧಾ : ಎಂದು ಅಕ್ಷರಗಳಿವೆ ಕ್ರಮವಾಗಿ ಒಂಬತ್ತು, ಮೂರು, ಒಂಬತ್ತು ಸಂಖ್ಯೆಯಾಗುತ್ತದೆ, ಇವನ್ನು ವ್ಯುತ್ಕ್ರಮ ಪಡಿಸಿದರೆ ಒಂಬತ್ತು ಮೂರು, ಒಂಬತ್ತು, ಒಂಬತ್ತು ಆಗುತ್ತದೆ. ಇದು ಶ್ರೀರಾಮಾನುಜಾಚಾರ್ಯರ ಶಾಲೀವಾಹನ ಶಕಾಬ್ದದ ಅವತಾರ ವರ್ಷ.



ನಮಾಮಿ ನಾರಾಯಣ ಪಾದಪಂಕಜಮ್
ಕರೋಮಿ ನಾರಾಯಣ ಪೂಜನಮ್ ಸದಾ
ವದಾಮಿ ನಾರಾಯಣನಾಮ ನಿರ್ಮಲಮ್
ಸ್ಮರಾಮಿ ನಾರಾಯಣ ತತ್ತ್ವಮವ್ಯಯಮ್.

ಕುಲಶೇಖರಾಳ್ವಾರ್

'ಧರ್ಮೋಽನಷ್ಟಃ' ಎಂಬ ವಾಕ್ಯಕ್ಕೆ ಒಂಬತ್ತು, ಐದು, ಸೊನ್ನೆ, ಒಂದು ಸಂಖ್ಯೆಯಾಗುತ್ತದೆ. ಇದನ್ನು ವ್ಯತ್ಕ್ರಮದಲ್ಲಿ ಬಳಸಿದರೆ 1, 0, 5, 9, ಇದು ಅವರ ನಿರ್ಯಾಣದ ಶಾಲೀವಾಹನ ಶಕೆಯ ವರ್ಷ,

ಇವರು ಶ್ರೀಪೆರಂಬೂರು ಎಂಬ ಕಾಂಚೀಮಂಡಲದಲ್ಲಿರುವ ಗ್ರಾಮದಲ್ಲಿ ಜನ್ಮತಾಳಿದರು. ವಿದ್ಯಾಭ್ಯಾಸವು ಆ ಸಮಯದ ಮಹಾ ವೇದಾಂತಿ ಎಂದು ಪ್ರಸಿದ್ಧರಾದ ಯಾದವ ಪ್ರಕಾಶರ ಸನ್ನಿಧಿಯಲ್ಲಿ ನಡೆಯುತ್ತಿದ್ದಿತು, ಅಲ್ಲಿ ಉಪದೇಶ ಪಡೆದ ರೀತಿಗೆ ಶ್ರೀರಾಮಾನುಜರ ಅಂತರಾತ್ಮನ ಒಪ್ಪಿಗೆಯಿಂರಲಿಲ್ಲವಾದ ಕಾರಣ ತಮ್ಮ ಸಂಶಯವನ್ನು ಬಗೆ ಹರಿಸುವುದಕ್ಕೆ ದೇವರಕಡೆಯೇ ನೋಡುತ್ತಿದ್ದರು. ಆ ಸಮಯದಲ್ಲಿ ಕಾಂಚೀಪುರದಲ್ಲಿ ದರ್ಶನ ನೀಡುತ್ತಿದ್ದ ಶ್ರೀದೇವರಾಜಸ್ವಾಮಿ ಕಾಂಚೀಪೂರ್ಣರೆಂಬ ಭಕ್ತಾಗ್ರೇಸರರ ಮೂಲಕವಾಗಿ ಶ್ರೀರಾಮಾನುಜರ ಮನಸ್ಸಿನಲ್ಲಿದ್ದ ಸಂಶಯವನ್ನು ಬಹಿರಂಗಪಡಿಸಿ ಅವುಗಳಿಗೆ ಉತ್ತರವನ್ನು ನೀಡಿ ಉಪಕರಿಸಿದರು.

"ಅಹಮೇವ ಪರಂ ತತ್ವಂ
ಉಪಾಯಸ್ತು ಪ್ರಪತ್ತಿಸ್ಸ್ಯಾತ್
ಅಂತಿಮಸ್ಮೃತಿ ವರ್ಜನಮ್ ॥
ದೇಹಾವಸಾನೇ ಮೋಕ್ಷಃ ಸ್ಯಾತ್
ಪೂರ್ಣಾರ್ಯಂತು ಸಮಾಶ್ರಯೇತ್

ಅಹಂ- ಪರಾತ್ಪರನಾದ ತತ್ತ್ವ ನಾನು, ನಾನೇ ವಿಷ್ಣುನಾರಾಯಣ.
ದರ್ಶನಂ- ಆತ್ಮ ಶಬ್ದವಾಚ್ಯನಾದರೂ ಜೀವನೂ, ಪರಮನೂ, ಬೇರೆ,
ಉಪಾಯಸ್ತು- ಮೋಕ್ಷ ಸಾಧನಮಾರ್ಗ ಪ್ರಪತ್ತಿಯೇ ಆಗುತ್ತದೆ,
ಈ ಭಗವತ್ ಪ್ರವೃತ್ತಿ ಎಂಬ ಪ್ರಪತ್ತಿಯೇ ಆಗುತ್ತದೆ.
ಅಂತಿಮಸ್ಮೃತಿ- ಮರಣ ಸಮಯದಲ್ಲಿ ಭಗವತ್‌ಸ್ಮೃತಿ ಇದ್ದೇ ತೀರಬೇಕೆಂಬ ನಿರ್ಬಂಧವಿಲ್ಲ.

ದೇಹಾವಸಾನೇಮೋಕ್ಷ- ಮೋಕ್ಷಪ್ರಾಪ್ತಿಗೆ ಈ ಉಪಾತ್ತ ದೇಹದ ವಿನಾಶವೇ ಸಮಯ.
ಪೂರ್ಣಾರ್ಯಂತು- ಜ್ಞಾನಾರ್ಜನೆಗೆ ಪೂರ್ಣಾರ್ಯರೆಂಬ ಬ್ರಹ್ಮ ನಿಷ್ಠರನ್ನು ಆಶ್ರಯಿಸತಕ್ಕದ್ದು.

ಗುರುಮುಖವಾಗಿ ತತ್ತ್ವ ನಿಷ್ಕರ್ಷೆಯನ್ನು ಮಾಡಿದ ಶ್ರೀರಾಮಾನುಜಾಚಾರ್ಯರಿಗೆ ಪರಮಗುರುವಾದ ಯಾಮುನಾಚಾರ್ಯರ ಅಂತಿಮ ಸಂದೇಶದ ಮನವರಿಕೆಯಾಯಿತು. ಅದರಂತೆ ಪ್ರಾಚೀನತಮವಾದ ಪರಮ ಋಷಿಗಳ ದರ್ಶನ ಸರಣಿಯನ್ನು ವಿಶುದ್ಧಗೊಳಿಸಬೇಕೆಂಬ ಉದ್ದೇಶದಿಂದ ಬ್ರಹ್ಮಸೂತ್ರಗಳನ್ನು ರಚಿಸಿದ ಪಾರಾಶರ್ಯರ ಅಂತೇ ವಾಸಿಯಾದ ಬೋಧಾಯನರ ವಿಪುಲವಾದ ವೃತ್ತಿ ಎಂಬ ಗ್ರಂಥವನ್ನು ಅವಲಂಬಿಸಿ ಇತರ ಪ್ರಾಚೀನ ಮಹರ್ಷಿಗಳ ವ್ಯಾಖ್ಯಾನ ಪರಂಪರೆಗಳನ್ನು ಪರಿಶೀಲಿಸಿ ಶ್ರೀ ಭಾಷ್ಯವೆಂದು ಶಾರದಾಪೀಠಾ ಧಿಷ್ಠಿತೆಯಾದ ಸರಸ್ವತಿಯಿಂದ ಸ್ತುತಿ ಪಡೆದ ಶಾರೀರಿಕ ಮೀಮಾಂಸಾ ಭಾಷ್ಯವನ್ನು ರಚಿಸಿದರು.

ಶ್ರೀರಾಮಾನುಜರ ಜ್ಞಾನ ಮತ್ತು ಭಕ್ತಿ ಸೂಕ್ಷ್ಮವೂ ದೃಢವೂ ಆಗಿದ್ದಿತು. ಶ್ರೀ ವೆಂಕಟೇಶ್ವರನ ಸಮ್ಮುಖದಲ್ಲಿ ತಮ್ಮ ತತ್ತ್ವದರ್ಶನವನ್ನು ವೇದಾಂತ ಸಂಗ್ರಹವೆಂದು ಹೆಸರು ಪಡೆದ ಉಪನ್ಯಾಸದಲ್ಲಿ ಸಮರ್ಪಣೆ ಮಾಡಿದರು.

ಭಗವದ್ರಾಮಾನುಜರ ದರ್ಶನದ ಪ್ರಕಾರ ವೇದ ಮೊದಲು ಕೊನೆಯ ವ್ಯಾಖ್ಯಾನದವರೆಗೂ ಏಕಮುಖ ವಾಗಿ ಹರಿಯುತ್ತಿರುವ ತತ್ತ್ವರಸ ವಿಶಿಷ್ಟಾದ್ವೈತವೆಂಬ ಸಂಕೇತವನ್ನು ಪಡೆದಿದೆ. ನಾರಾಯಣನೊಬ್ಬನೇ ಎಲ್ಲಕ್ಕೂ ಆಧಾರವಾದ ಜ್ಞಾನಾನಂದಮಯ ವಸ್ತು. ನಾರಾಯಣನೇ ಪುರುಷೋತ್ತಮನು. ಅವನಿಗೆ ಶರೀರವಾಗಿ, ಧರ್ಮವಾಗಿ ಶೇಷವಾಗಿರುವ ತತ್ತ್ವ ಸರ್ವ ಎಂಬ ಶಬ್ದದಿಂದ ಹೇಳಬಹುದಾಗಿದೆ. ಸರ್ವತತ್ತ್ವಕ್ಕೆ ಸ್ವಾಮಿಯೂ ಆಧಾರವೂ ಆದವನು ಸರ್ವೇಶ್ವರ ನಾರಾಯಣ.

ಸರ್ವತತ್ತ್ವದಲ್ಲಿ ಚೇತನ ಅಚೇತನ ಎಂದು ಎರಡು ವರ್ಗವಿರುತ್ತದೆ. ಚೇತನನು ಜೀವಾತ್ಮ ಜ್ಞಾನಾನಂದ [illegible] ಹೌದು ಅಚೇತನವಾದ ಪ್ರಕೃತಿ ಪರಿಣಾಮವಾದ ದೇಹ ಚೇತನನಿಗೆ ಶರೀರವಾಗಿ ಎಲ್ಲಾ ವಿಧದಲ್ಲೂ ಅವನ ಇಚ್ಛೆಯಂತೆ ಅವನ ಬಳಕೆಗೆ ಮತ್ತು ಪ್ರಯೋಜನಕ್ಕೆ ಒದಗುವಂತೆ ಜೀವಾತ್ಮನು ಪ್ರಕೃತಿ ಪ್ರಾಕೃತ ವಸ್ತುಗಳೊಡನೆ ತನ್ನನ್ನು ಪರಮೇಶ್ವರನ ಬಳಕೆ ಮತ್ತು ಪ್ರಯೋಜನಕ್ಕೆ ಈಡುಮಾಡಿಕೊಳ್ಳುವುದೂ ಅವನಿಗೆ ಸ್ವರೂಪವಾಗುತ್ತದೆ. ಈ ನಿಲುವೇ ಈಶಸೇವೆ. ಇದಕ್ಕೆ ವಿರುದ್ಧವಾದ ನಿಲುವೆಲ್ಲಾ ಅಜ್ಞಾನದಿಂದ ಏರ್ಪಟ್ಟ ಅಹಂಕಾರ ಮಮಕಾರಗಳಿಗೆ ಗೋಚರವಾದ ಕಾಮಕ್ರೋಧಾದಿಗಳಿಗೆ ಎಡೆಯಾದ ಸಂಸಾರಿಕ ದುಸ್ಥಿತಿ. ಶ್ರೀ ಭಾಷ್ಯದ ಹೆಣಿಕೆ ಜೀವಾತ್ಮನು ಈಶ್ವರನಿಗೆ ಶೇಷವಸ್ತು ಎಂಬ ವೇದಾಂತದ ಪ್ರತಿಪಾದನೆಯಾಗಿದೆ.

## ಶ್ರೀ ರಾಮಾನುಜರಿಗೆ ಕಾಣಿಸಿಕೊಂಡ ನಾರಾಯಣಸ್ವಾಮಿ

ಚೇತನ ತತ್ತ್ವಕ್ಕೆ ಸೇರಿಕೊಂಡಿರುವ ಗುಣಗಳು ಇಬ್ಬಗೆಯಾಗಿವೆ. ಮೊದಲನೆಯದು ಜ್ಞಾನಾನಂದಮಯತ್ವ ಇದು ಚೇತನನ್ನು ಪರಮ ಚೇತನನ ವರ್ಗಕ್ಕೆ ಸೇರುವ ಅರ್ಹತೆಯನ್ನು ತೋರಿಸುತ್ತದೆ. ಮತ್ತೊಂದು ಗುಣ ಶೇಷತ್ವ ಮೆಂಬುದು ಇದು ಚೇತನನ್ನು ಅಚೇತನದೊಡನೆ ಹೊಂದಿಕೊಳ್ಳುವ ಅರ್ಹತೆಯನ್ನು ತೋರಿಸುತ್ತದೆ. ಜ್ಞಾನಾನಂದ ಮಯತ್ವ ಎಂಬ ಧರ್ಮ ಪ್ರಧಾನವಾದರೆ ಅಚೇತನಕ್ಕಿಂತ ಮಿಗಿಲಾದ ವಸ್ತು ಎಂದು ಚೇತನನ ಹಿರಿಮೆಯನ್ನು ಕಾಣ ಬಹುದು. ಶೇಷತ್ವವನ್ನು ಪ್ರಧಾನವಾಗಿ ಬಗೆದರೆ ಸೇವೆಯೇ ಚೇತನನಿಗೆ ಒಡಹುಟ್ಟಿದ ಧರ್ಮವೆಂದು ಭಾಸವಾಗುತ್ತದೆ. ಚೇತನ ಪ್ರವೃತ್ತಿಯಲ್ಲಿ ಸಂಸಾರದಿಂದ ಬಿಡುಗಡೆ ಎಂಬ ಮೋಕ್ಷ ಪರಮ ಪುರುಷಾರ್ಥ.

ಆ ನೆಲೆಯಲ್ಲಿ ಚೇತನನು ಸ್ವತಂತ್ರನಾಗಿ ಸ್ವಾನುಭವವನ್ನು ಮಾತ್ರ ಉಳಿಸಿಕೊಳ್ಳುವ ಕೈವಲ್ಯ ಸಾಮ್ರಾಜ್ಯ ವನ್ನು ಪಡೆಯಬಹುದು ಅಥವಾ ಅದನ್ನು ಉಪೇಕ್ಷೆಮಾಡಿ ಈಶ್ವರ ಸಾನ್ನಿಧ್ಯದಲ್ಲಿ ಸೇವಾ ಸಾಮ್ರಾಜ್ಯವನ್ನು ಹೊಂದ ಬಹುದು. ಈ ಎರಡು ಬಗೆಯಾದ ಅನುಭವದಲ್ಲಿ ಯಾವುದೊಂದು ಸಿದ್ಧಿಸಬೇಕಾದರೆ ಪ್ರಕೃತಿ ಸಂಪರ್ಕದ ನಿರ್ಮೂಲನೆ ಏರ್ಪಡಬೇಕು. ಆ ನಿರ್ಮೂಲನವೇ ಮೋಕ್ಷ. ಅದನ್ನು ಒದಗಿಸಿಕೊಡಬಲ್ಲ ಸ್ವತಃ ಸಮರ್ಥ ತತ್ತ್ವ ನಾರಾಯಣನು.

ಆದ್ದರಿಂದ ನಾರಾಯಣನಲ್ಲಿ ಚೇತನನು ಕೈಗೊಳ್ಳಬೇಕಾದ ಪ್ರಪತ್ತಿ ಎಂದರೆ ಈಶ್ವರಾಲಂಬನೆಯೇ ಶೇಷತ್ವ ಸ್ವರೂಪಕ್ಕೆ ಹೊಂದಿಕೊಳ್ಳುವ ಮಾರ್ಗ. ಈಶ್ವರನು ಪ್ರಪತ್ತಿ ಮಾರ್ಗಾವಲಂಬನಕ್ಕೆ ತನ್ನಲ್ಲಿ ಚೇತನನನ್ನು ಬರಮಾಡಿಕೊಳ್ಳುವ ಬಗೆಗೆ ಭಕ್ತಿ ಶಬ್ದಕ್ಕೆ ಅರ್ಥವಾಗುತ್ತದೆ.

ಚೇತನನಿಗೆ ಭಗವಂತನಲ್ಲಿ ಭಕ್ತಿ ಮೂಡುವುದು ಭಗವಂತನ ಪ್ರಭಾವದಿಂದ ಅಥವಾ ಅವನು ಸೇರಿಕೊಂಡಿ ರುವ ಪ್ರಾಕೃತ ಪದಾರ್ಥಗಳಲ್ಲಿ ಅತೃಪ್ತಿ ಅವಿಶ್ವಾಸ ಏರ್ಪಡುವುದರಿಂದ ಪ್ರಕೃತಿಯಲ್ಲಿ ಅರುಚಿಪೂರ್ವಕವಾಗಿ ಈಶ್ವರನಲ್ಲಿ

ಭಕ್ತಿಮಾಡುವುದು ಒಂದು ಕ್ರಮ. ಈಶ್ವರನಲ್ಲಿ ಚೇತನನು ಬೆಳೆಸಿದ ಭಕ್ತಿಯ ಪರಿಣಾಮವಾಗಿ ಪ್ರಾಕೃತ ಪದಾರ್ಥದಲ್ಲಿ ಅರುಚಿ ಏರ್ಪಡುವುದು ಮತ್ತೊಂದು ಕ್ರಮ.

ಮೊದಲನೆ ಕ್ರಮ ಉಪನಿಷತ್ತುಗಳ ಸಂಸ್ಕೃತ ಭಾಗಗಳಲ್ಲಿಯೂ, ಎರಡನೆಯದು ದ್ರಾವಿಡ ಭಾಗದಲ್ಲಿಯೂ ಪ್ರತಿಪಾದಿತವಾಗಿದೆ. ಶ್ರೀ ರಾಮಾನುಜರ ವಿಷಯವಾಗಿ ಏರ್ಪಟ್ಟಿರುವ ಮುಂದಿನ ಶ್ಲೋಕ ಅವರ ನಿಷ್ಠೆಯನ್ನು ತೋರಿಸುತ್ತದೆ.

"ಯಃ ನಿತ್ಯಮ್ ಅಚ್ಯುತ ಪದಾಂಬುಜ ಯುಗ್ಮ ರುಕ್ಮ ವ್ಯಾಮೋಹತಃ,
ತದಿತರಾಣಿ ತೃಣಾಯಮೇನೆ .... ... ....... ......."

ಮಹಾಪುರುಷರಾದ ರಾಮಾನುಜರು ಸಂತತವೂ ಶರಣ್ಯನಾದ ನಾರಾಯಣನ ಪಾದಕಮಲವೆಂಬ ಸುವರ್ಣದಲ್ಲಿ ಮಿಗಿಲಾದ ಪ್ರೇಮ ಬೆಳೆಸಿ ಉಳಿದ ಸಕಲ ವಸ್ತುಗಳನ್ನು ಸ್ವಾರ್ಥದೃಷ್ಟಿಯಲ್ಲಿ ತೃಣಕ್ಕೆ ಸಮಾನವೆಂದು ಪರಿಗಣಿಸಿದರು. ಈ ವಾಕ್ಯದಲ್ಲಿ ಶೇಷತ್ವ, ಈಶ್ವರ ಸಾನ್ನಿಧ್ಯ, ಪ್ರಕೃತಿ ವೈರಾಗ್ಯ ಎಂಬ ಮೂರು ಅಂಶವು ವ್ಯಕ್ತಪಡುತ್ತದೆ.

ಶ್ರೀರಂಗದಲ್ಲಿ ಶ್ರೀ ರಾಮಾನುಜರು ದರ್ಶನ ಪ್ರವರ್ತನೆಯಲ್ಲಿ ನಿರತರಾಗಿದ್ದಾಗ ಒಮ್ಮೆ ಆ ದೇಶದ ಚೋಳ ರಾಜನು ಅವರನ್ನು ತನ್ನ ಶೈವ ಸಿದ್ಧಾಂತದ ಕಡೆಗೆ ಒಲಿಸಿಕೊಳ್ಳಬೇಕೆಂದು ಮನಸ್ಸು ಮಾಡಿದನು. ಶ್ರೀ ರಾಮಾನುಜರ ಪ್ರಮುಖ ಶಿಷ್ಯರಾದ ಶ್ರೀವತ್ಸ ಚಿಹ್ನಮಿಶ್ರರೆಂಬ ಮಹರ್ಷಿ ಒಬ್ಬರು ಆ ಸುದ್ದಿಯನ್ನು ಕೇಳಿ ತಮ್ಮ ವಿಪುಲವಾದ ಗುರುಭಕ್ತಿಯ ಪರಿಣಾಮವಾಗಿ ಮನಸ್ಸಿನಲ್ಲಿ ಕಳವಳಗೊಂಡರು. ಉಪದೇಶ ರತ್ತಿನ ಮಾಲೈ ಎಂಬ ಯತೀಂದ್ರ ಪ್ರವಣ ರಚಿತ ಪ್ರಬಂಧದಲ್ಲಿ ಶಿಷ್ಯಾಚಾರ್ಯ ಸಂಬಂಧವನ್ನು ಕುರಿತ ಪದ್ಯವೊಂದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಆಚಾರ್ಯನೆ ಶಿಚ್ಚನ್ ಆರುಯಿರೈ ಪೇಣುಮವನ್
ತೇಶಾರುಮ್ ಶಿಚ್ಚವವನ್ ಶೀರ್ವಡಿವೈ ಆಶೆಯುಡನ್
ನೋಕ್ಕುಮವನ್ ಎನ್ನುಮ್ ನುಣ್ಣರಿವೈ ಕೇಟ್ಟು.
ವೈತ್ತುಂ ಆಕ್ಕುಂ ಅನ್‌ನೇರ್ ನಿರ್ಕ್ಕ ಅರಿದಾಮ್ ॥

ಶಿಷ್ಯನೂ ಆಚಾರ್ಯನೂ ಸಹ ಸರ್ವದಾ ಜಾಗರೂಕರಾಗಿರಬೇಕು. ಶಿಷ್ಯನ ಆತ್ಮಪೋಷಣೆಯಲ್ಲಿ ಆಚಾರ್ಯನಿಗೂ ಅಂತಹ ಆಚಾರ್ಯನನ್ನು ಉಳಿಸಿಕೊಟ್ಟಿರುವ ದೇಹದ ಪೋಷಣೆಯಲ್ಲಿ ಶಿಷ್ಯನೂ ಆಲಸ್ಯ ತಾಳದೆ ಸದಾ ಜಾಗ್ರತರಾಗಿರಬೇಕು. ಎಂಬುದು ಶಿಷ್ಯಾಚಾರ್ಯ ಬಾಂಧವ್ಯದಲ್ಲಿ ಮುಖ್ಯವಾದ ನಿಯಮ, ಈ ನಿಯಮ ಪರಿಪಾಲನೆ ದುಸ್ಸಾಧ್ಯವಾದುದೆಂದೂ ಕೇವಲ ಮಹನೀಯರು ಮಾತ್ರ ಅದನ್ನು ಪರಿಪಾಲಿಸಬಹುದೆಂದೂ ಮೇಲಿನ ಪದ್ಯ ನಿರೂಪಿಸುತ್ತದೆ.

ಶ್ರೀವತ್ಸ ಚಿಹ್ನಮಿಶ್ರರು ಈ ವಿಧವಾದ ಗುರು-ಶಿಷ್ಯ ಬಾಂಧವ್ಯವನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದ ವಿದ್ವನ್ಮಣಿ. ಅವರ ಮನಸ್ಸಿನಲ್ಲಿ ಶಂಕೆ ಉಂಟಾಗುತ್ತದೆ ಚೋಳರಾಜನ ಆಸ್ಥಾನಕ್ಕೆ ತಾನೇ ರಾಮಾನುಜರ ಪರವಾಗಿ ಹೊರಟರು. ಶ್ರೀರಾಮಾನುಜರಿಗೆ ತಾಮಸ ಪ್ರಕೃತಿಯವನಾದ ರಾಜನಿಂದ ತೊಂದರೆ ಏರ್ಪಡಬಹುದು ಎಂದು ಭೀತಿ ಪಟ್ಟು ಯಾವ ಸುದ್ದಿಯನ್ನು ಕೊಡದೆ ಶಿಷ್ಯನ ಒತ್ತಡವೆಂಬ ನೆಪದಿಂದ ಶ್ರೀರಾಮಾನುಜರನ್ನು ಆಂಡಾನ್ ಮತ್ತು

ಆಚ್ಚಾನ್ ಎಂಬ ಇಬ್ಬರು ಶಿಷ್ಯ ಸಂಗಡಿಗರೊಂದಿಗೆ ಕಾವೇರಿಯ ಮಾರ್ಗವಾಗಿ ಪಶ್ಚಿಮ ದೇಶಕ್ಕೆ ತ್ವರಿತವಾಗಿ ಹೋಗಿ ಸೇರುವಂತೆ ಏರ್ಪಡಿಸಿದರು.

ಶ್ರೀವತ್ಸ ಚಿಹ್ನರು ತಮ್ಮ ಕೃತ್ಯವನ್ನು ನೆರವೇರಿಸುವುದಕ್ಕಾಗಿ ಚೋಳರಾಜಧಾನಿಗೆ ಹೊರಟರು. ರಾಮಾನುಜರ ಬರವನ್ನೇ ಎದುರು ನೋಡುತ್ತಿದ್ದ ಚೋಳರಾಜನು ಮತ್ತಾರನ್ನೂ ಒಪ್ಪುವುದಿಲ್ಲ ಎಂದು ತಿಳಿದ ರಾಮಾನುಜ ಶಿಷ್ಯರಾದ ಶ್ರೀವತ್ಸಚಿಹ್ನಮಿಶ್ರರು ರಾಮಾನುಜ ವೇಷವನ್ನು ತಾಳಿ ತಾವೇ ರಾಮಾನುಜರೆಂದು ಹೇಳಿಕೊಂಡು ವಾದದಲ್ಲಿ ತೊಡಗಿ ರಾಮಾನುಜ ಸಿದ್ಧಾಂತವನ್ನು ಊರ್ಜಿತಪಡಿಸಿ ಶಿವಪಾರಮ್ಯದ ಶೈಥಿಲ್ಯವನ್ನು ಪ್ರಕಾಶಪಡಿಸಿದರು. ಇದರ ಪರಿಣಾಮವಾಗಿ ರಾಜನ ಇಚ್ಛೆಯಂತೆ ಶ್ರೀವತ್ಸಾಂಕಮಿಶ್ರರು ತಮ್ಮ ಕಣ್ಣು ಗುಡ್ಡೆಗಳನ್ನು ಕಿತ್ತುಹಾಕಿ ಶರೀರದಲ್ಲಿ ಅಂಧತೆಯನ್ನು ಅನುಭವಿಸಬೇಕಾಯಿತು.

ಆದರೂ ಅವರ ಹರ್ಷೋತ್ಸಾಹಗಳು ಎಲ್ಲೆ ಮೀರಿತು. ಅದು ಗುರುಸೇವೆಯ ಪರಮಾವಧಿಯನ್ನು ಮುಟ್ಟಿತು. ಶ್ರೀವತ್ಸಚಿಹ್ನಮಿಶ್ರರಿಗೆ ಕೂರೇಶರೆಂಬ ಹೆಸರು ಪ್ರಸಿದ್ಧವಾದುದು. ಅವರು ವಾದದಲ್ಲಿ ಚೋಳರಾಜನ ಮತವನ್ನು ಖಂಡಿಸಿರುವ ಗ್ರಂಥಕ್ಕೆ ಕೂರೇಶವಿಜಯವೆಂದೇ ಹೆಸರು. ಅವರ ವಿಷಯವಾದ ಸಂಸ್ಕೃತ ಶ್ಲೋಕ ಈ ರೀತಿ ಇದೆ-

"ಜಯತಿ ಪರಂ ಪರತತ್ತ್ವಂ ಸ್ಥಾಪಯನ್ನುದ್ವೇಲವೇದಾತ್
ಉಪನಿಷದ್ವಿಷಯಗಹನಾರ್ಥಾನ್ ನ್ಯಾಯತಃ ಅರ್ಥಾನ್ ವಿವೃಣ್ವನ್
ಅಧರಿತ ಶಿವಪಾರಮ್ಯಾರ್ಥಿ ಚೋಳಾಧಿರಾಜಃ
ಶಮಿತ ವಿಮತವಾದಃ ಶಾಂತಿಮಾನ್ ಕೂರನಾಥಃ ॥

ತತ್ತ್ವ ಸರಣಿಯನ್ನನುಸರಿಸಿ ನಾರಾಯಣನ ಪಾರಮ್ಯವನ್ನು ಸಾರುವುದರಲ್ಲಿ ಕೂರೇಶರಿಗೆ ಅಮಿತವಾದ ಆನಂದ ಉತ್ಸಾಹಗಳು ಉಪನಿಷತ್ತುಗಳಲ್ಲಿ ಅತಿಗೂಢವಾದ ಅರ್ಥಗಳನ್ನು ನ್ಯಾಯ ಸರಣಿಯಲ್ಲಿ ಪ್ರಕಾಶಪಡಿಸುವ ಅನ್ಯಾದೃಶ ಪ್ರತಿಭೆಯನ್ನು ಪಡೆದವರು,

ಶಿವಮೂರ್ತಿಗೆ ಪಾರಮ್ಯವನ್ನು ಸ್ಥಾಪಿಸಬೇಕೆಂದು ಬಯಸಿದ ಚೋಳಾಧಿರಾಜನನ್ನು ವಿಜಯ ಪೀಠದಿಂದ ಇಳಿಸಿದರು, ಎದುರಾಳಿಗಳ ವಿವಿಧ ಅಪಮಾನಜನಕ ಆರೋಪಗಳನ್ನು ತಮ್ಮ ಸಮಾಧಾನೋಕ್ತಿಗಳಿಂದ ಶಮನಗೊಳಿಸಿದರು ಗಂಭೀರ ಸಾಗರದಂತೆ ಕಲಕದ ಚಿತ್ತರಾದ ಶ್ರೀಕೂರನಾಥನಿಗೆ ಜಯವಾಗಲಿ ಎಂಬುದು ಈ ಶ್ಲೋಕದ ಭಾವ.

ಶ್ರೀರಾಮಾನುಜರು ಕೂರೇಶರ ಇಚ್ಛಾನುಸಾರ ಕಾವೇರಿಯ ಮಾರ್ಗವಾಗಿ ಮೈಸೂರು ಪ್ರಾಂತ್ಯದ ಮೇಲುಕೋಟೆಯ ಸರಹದ್ದಿಗೆ ಬಂದರು. ಆ ಪ್ರಾಂತ್ಯದಲ್ಲಿ ಅನೇಕ ಅನ್ಯಮತಸ್ಥರನ್ನು ವಾದದಲ್ಲಿ ತಮ್ಮ ಕಡೆಗೆ ಒಲಿಸಿಕೊಂಡರು. ಒಮ್ಮೆ ಇವರಿಗೆ ಸ್ವಪ್ನದಲ್ಲಿ ಶ್ರೀನಾರಾಯಣಸ್ವಾಮಿಯ ಮೂರ್ತಿ ಗೋಚರವಾಯಿತು. ದಟ್ಟವಾದ ಕಾಡು ನಿರ್ಜನ ಪ್ರದೇಶ ಎಲ್ಲೆಲ್ಲೂ ಹುತ್ತ, ಸ್ವಾಮಿ ಎಲ್ಲಿ ನೆಲೆಗೊಂಡಿರುವನೋ ಎಂಬುದು ಗೋಚರವಾಗಲಿಲ್ಲ, ಹುಡುಕುತ್ತಾ ತೊಳಲುತ್ತಾ ಒಂದಾನೊಂದು ದಿನ ಪುಷ್ಯಮಾಸ ತಮ್ಮ ಜನ್ಮ ದಿನದ ಮರುದಿನ ಒಂದು ಹುತ್ತದಲ್ಲಿ ಶ್ರೀ ನಾರಾಯಣ ಸ್ವಾಮಿ ಅವ್ಯಕ್ತರಾಗಿರುವುದು ತಿಳಿದು ಬಂದಿತು. ಐತಿಹ್ಯವಾಗಿ ಒಂದು ಕಾಮಧೇನು ಹಾಲನ್ನು ಹುತ್ತದ ಮೇಲೆ ಸೋರಿಸುತ್ತಿದ್ದುದನ್ನು ಕಂಡರು. ಅದರ ಪರಿಣಾಮವಾಗಿ ಹುತ್ತ ಕರಗುತ್ತಾ ದಿವ್ಯವಾದ ಮಂಗಳಮೂರ್ತಿ ಒಂದು

ಕಾಣಿಸಿಕೊಂಡಿತು. ಆಗ ಶ್ರೀಗೋದಾದೇವಿಯು ನುಡಿದಿರುವ ತಿರುಪ್ಪಾವೈ ಪ್ರಬಂಧದಲ್ಲಿ ಪ್ರಸಕ್ತಸನ್ನಿವೇಶಕ್ಕೆ ಹೊಂದಿಕೊಂಡ ಪದ್ಯವನ್ನು ಸ್ಮರಿಸಿಕೊಂಡರು.

"ಏತ್ತ ಕಲಂಗಳ್ ಎದಿರ್‌ಪೊಂಗಿ ಮೀದ್ ಅಳಿಪ್ಪ
ಮಾತ್ತಾದೇ ಪಾಲ್ ಶೊರಿಯುಂ ವಳ್ಳಲ್ ಪೆರುಂ ಪಶುಕ್ಕಳ್
ಆತ್ತಪಡೈತ್ತಾನ್ ಮಗನೇ ಅರಿವುರಾಯ್
ಊತ್ತಮುಡೆಯಾಯ್ ಪೆರಿಯಾಯ್ ಉಲಹಿನಿಲ್
ತೋತ್ತಮಾಯ್ ನಿನ್ನಶುಡರೇ ತುಯಲೆಳಾಯ್
ಮಾತ್ತಾರ್ ಉನಕ್ಕು ವಲಿತೊಲಿಂದು ಉನ್‌ವಾಶಲ್‌ಕಣ್
ಆತ್ತಾದುವಂದು ಅಡಪ್ಪಣಿಯುಮಾ ಪ್ಪೋಲೆ
ಪ್ಪೋತ್ತಿಯಾಂ ವಂದೋ ಪುಹಳಂದೇ ಲೋರೆಂಪಾವಾಯ್ ॥

ಗೋಮಾತೆಯು ಅಪರಿಮಿತವಾದ ಹಾಲನ್ನು ಸುರಿಸಿ ಅದರಿಂದ ಸಮೃದ್ಧಿ ನೀಡಿದ ನಂದಗೋಪನಿಗೆ ಮಗನಾಗಿ ಸ್ವತಃ ಸಂಭವನಾದ ಭಗವಂತನೇ ನೀನು ಎದ್ದು ಕಾಣಿಸಿಕೊ, ಲೋಕೈಕಲೋಚನನು ನೀನು. ಶತ್ರುಗಳೂ ನಿರ್ವೇದದಲ್ಲಿ ಅಸಹಾಯಕರಾಗಿ ನಿನ್ನನ್ನು ಮೊರೆಯಿಡುವಂತೆ ನಾನು ಭಕ್ತಿಯಿಂದ ನಿನಗೆ ಮಂಗಳನೆತ್ತು ಸ್ತೋತ್ರಮಾಡಿ ನನ್ನ ಜನ್ಮವನ್ನು ಸಾರ್ಥಕ ಪಡಿಸಿಕೊಳ್ಳುವೆನು. ಸ್ವಾಮಿಯೇ ಕಣ್ಣಿಗೆ ತೋರು. ಹೀಗೆಂದು ಅನುಸಂಧಾನಮಾಡಿ ಶ್ರೀ ನಾರಾಯಣಸ್ವಾಮಿಯ ದಿವ್ಯಮೂರ್ತಿಯನ್ನು ಆಪಾದಮಸ್ತಕ ಕಣ್ಣಾರೆ ಕಂಡು ಪ್ರಾಚೀನ ದಿವ್ಯಸೂರಿಗಳ ಮಹರ್ಷಿಗಳು ಶ್ಲೋಕಗಳನ್ನು (ಅನುಸಂಧಾನ ಮಾಡುತ್ತಾ) ಪಠಿಸುತ್ತಾ ಅವನ ಪಾದಗಳಿಗೆ ಎರಗಿ ಅವನ ಪೂಜೆಯಲ್ಲಿ ತೊಡಗಿ ಕೃತಾರ್ಥರಾದರು.

"ಪಗಲ್ ಕಂಡೇನ್ ನಾರಣನೈ ಕಂಡೇನ್
ಕನವಿಲ್ ಮಿಹ ಕಂಡೇನ್ ಮೀಂಡ್ ಅವನೈ
ಮೈಯ್ಯೇ ಮಿಹ ಕಂಡೇನ್ ಊನ್ ತಿಗಳಂ
ಮೇನಿ ಒಳಿತಿಗಳಂ ಶೇವಡಿಯಾನ್
ವಾನ್ ತಿಗಳಂ ಶೋದಿಪಡಿವು
ವಡಿಕ್ಕೋಲ್ ವಾಳ ನಡಂಕಣ್ ಮಾಮಲರಾಳ್
ಶೆವ್ವಿಪ್ಪಡಿಕ್ಕೋಲನ್ ಕಂಡು ಅಹೂ ಪನ್ನಾಳ್
ಅಡಿಕ್ಕೋಲಿ ಜ್ಞಾಲತ್ತಾರ್ ಪಿನ್ನವರ್ ನಲಂಪುರಿಂದುದು
ಎನ್‌ಗೊಲೋ ಕೋಲತ್ತಾಲ್ ಇಲ್ಲೈ ಕುರೈ
ಜಿತಂತೇ ಪುಂಡರೀಕಾಕ್ಷಾ ನಮಸ್ತೇ
ವಿಶ್ವಭಾವನ್ ನಮಸ್ತೇಸು ಹೃಷೀಕೇಶ್ ಮಹಾಪುರುಷ ಪೂರ್ವಜ
ಒರನಾಯಕಮಾಯ್ ಓಡ ಉಲಹಂಡನ್
ಆಂಡವರ್ ಕರುನಾಯ್ ಕವರ್ನ್ನದ ಕಾಲರ್
ಶಿದೈಹಿಯ ಪಾನೆಯರ್ ಪೆರುನಾಡುಕಾಣ

ಇಮ್ಮೈಯಿಲ್ ಪಿಚ್ಚೈತಾರ್ಯ್ ಕೊಳ್ವರ್
ತಿರುನಾರಾಯಣನ್ ತಾಳ್ ಕಾಲಂಪೆರಶಿನ್ದಿತ್ತು ಉಯ್ಮಿನೋಂ

"ಮನೋವಾಕ್ ಕ್ಕಾಯೈಃ, ಅನಾದಿಕಾಲ ಪ್ರವೃತ್ತ ಅನಂತ ಅಕೃತ್ಯಕರಣ ಕೃತ್ಯಾಕರಣ ಭಗವದಪಚಾರ ಭಾಗವದಾಪಚಾರ ಅಸಹ್ಯಾಪಚಾರ ರೂಪ ನಾನಾವಿಧ ಅನಂತಾಪಚಾರಾನ್ ಆರಬ್ದ ಕಾರ್ಯಾನ್ ಅನಾರಬ್ಧ ಕಾರ್ಯಾನ್ ಕೃತಾನ್ ಕ್ರಿಯಮಾಣಾನ್ ಕರಿಷ್ಯಮಾಣಾಂಶ್ಚ ಸರ್ವಾನ್ ಅಶೇಷತಃ ಕ್ಷಮಸ್ವ."

ಪಗಲ್ ಕಂಡೇನ್ – ಹಗಲನ್ನು ಕಂಡೆನು. ನಾರಾಯಣನನ್ನು ಕಂಡೆನು, ಕನಸಿಗಿಂತ ಮಿಗಿಲಾಗಿ ಕಂಡೆನು, ಮಾಧವನನ್ನು ನಿಜವಾಗಿ ವಿಶದವಾಗಿ ಕಂಡೆ. ಪ್ರಜ್ವಲಿಸುವ ಚಕ್ರ, ಮನೋಹರವಾದ ಪಾದಗಳು, ಆಕಾಶವನ್ನು ಬೆಳಗಿಸುವ ಜ್ಯೋತಿ ದಿವ್ಯಮೂರ್ತಿ. ದಿವ್ಯಸುಂದರಿಯಾದ ವಿಶಾಲನೇತ್ರೆಯಾದ ಪದ್ಮಾಸಿನಿಯು. ಈ ಮೂರ್ತಿಯ ಸೊಬಗನ್ನು ಕಂಡು ಅಗಲದೆ ಸೇರಿರುವ ಈ ದೃಶ್ಯ ಭೂಲೋಕವಾಸಿಗಳ ಪುಣ್ಯದ ಫಲೋದ್ಗಮವೋ. ಪುಂಡರೀಕಾಕ್ಷ ನಿನಗೆ ಜಯವಾಗಲಿ ; ವಿಶ್ವಜನಕ ನಿನಗೆ ನಮಸ್ಕಾರ, ಸ್ವಾಮಿ ನಿನಗೆ ನಮಸ್ಕಾರ, ಮಹಾಪುರುಷ ಪೂರ್ವಜ ನಮಸ್ತೆ !

ಲೋಕೈಕ ನಾಯಕನಾಗಿ ಸಾಮ್ರಾಜ್ಯವನ್ನು ನಡೆಸಿದ ಚಕ್ರವರ್ತಿಗಳು ಶಮೆಯ ವೈಷಮ್ಯದಿಂದ ಮಡಕೆ ಹಿಡಿದು ದೀನರಾಗಿ ಹಸಿದ ಕುನ್ನಿಗಳೂ ಕಾಲಂ ಕಚ್ಚುವ ಅವಸ್ಥೆಗೆ ಗುರಿಯಾಗುತ್ತಾರೆ. ಅವರ ದೀನತೆಯು ಲೋಕಕ್ಕೇ ಗೋಚರವಾಗುವುದು. ಆದುದರಿಂದ ಕಾಲಕಳೆಯದೆ ಸುಖ ಒದಗಲು ನಾರಾಯಣನ ಶ್ರೀಯುತ ಚರಣಗಳನ್ನು ಧ್ಯಾನಿಸಿ ಬಾಳುವುದು ಲೇಸು.

ಮನಸ್ಸಿನಲ್ಲಿ. ನುಡಿಯಲ್ಲಿ. ನಡತೆಯಲ್ಲಿ ಅನಾದಿ ಕಾಲದಿಂದ ಎಸಗಿದ ಅಕೃತ್ಯದ ಕಾರಣ ಮಾಡಬೇಕಾದ್ದನ್ನು ಬಿಟ್ಟದ್ದು ಭಗವಂತನು ಅವರ ಭಕ್ತರು, ತಾನೂ ಸಹ ಸಹಿಸಲಾರದ ಅಪಚಾರಗಳನ್ನು ಎಸಗಿ ಹಿಂದೆಮಾಡಿದ ಇಂದು ಮಾಡುವ ಮುಂದೆಯೂ ಮಾಡಬಹುದಾದ ಸಕಲ ಕಾರ್ಯಗಳ ಫಲವಾದ ದುಃಖಗಳನ್ನೆಲ್ಲಾ ಪೂರ್ಣವಾಗಿ ನೀಗಿಸಲು ನನ್ನನ್ನು ಕ್ಷಮಿಸು ಎಂದು ಅವನ ಪಾದಾರವಿಂದಗಳಲ್ಲಿ ನಮಸ್ಕಾರ ಪೂರ್ವಕವಾಗಿ ಸೇವೆಯನ್ನು ಸಲ್ಲಿಸಿದ ಮಹಾಭಾಗ್ಯ ಶ್ರೀರಾಮಾನುಜರಿಗೆ,

ಚೋಳರಾಜನಿಂದ ತೊಂದರೆ ಒದಗಬಹುದೆಂಬ ಶಂಕೆಯಿಂದ ಕೂರೇಶರು ಏರ್ಪಡಿಸಿದ ಸಂವಿಧಾನಕ್ಕೆ ನಿಮಿತ್ತಕಾರಣವಾದವನು ಶ್ರೀ ನಾರಾಯಣಸ್ವಾಮಿ. ಭೀತಿಯನ್ನು ಕಲ್ಪಿಸಿ ತೊಂದರೆಗೀಡಾಗುವಂತೆ ಮಾಡಿ ತನ್ನ ಸಾನಿಧ್ಯಕ್ಕೆ ಬರಮಾಡಿ ದರ್ಶನವನ್ನು ನೀಡಿ ಆತ್ಮನನ್ನು ಆನಂದಗೊಳಿಸಿ ಜನರನ್ನು ಸತ್ಪಥದಲ್ಲಿ ಒಯ್ಯುವುದಕ್ಕೆ ಉತ್ಸಾಹವನ್ನು ಉಂಟುಮಾಡಿದ ಸುಭಗ ಕರುಣಾಮೂರ್ತಿ ಮೇಲುಕೋಟೆಯ ಶ್ರೀ ನಾರಾಯಣಮೂರ್ತಿ.

# ಯತಿರಾಜ ಸಾರ್ವಭೌಮನ ಜಯಂತ್ಯುತ್ಸವ

"ಸಂತ್ಯಜ ಸಕಲಮುಪಾಯಂ ಚರಣಂವ್ರಜ
ರಾಮಾನುಜ ಚರಣಂ ಶರಣಂ"
ಪಶ್ಯಸಿ ತಮಸಃ ಪಾರಂ ನಿತ್ಯಂ ಸತ್ಯಂ ಸತ್ಯಂ ಪುನರಪಿಸತ್ಯಂ
ಮೇಷೇ ಪುನರ್ವಸು ದಿನೇ ಪಾಂಚಜನ್ಯಾಂಶ ಸಂಭವಮ್
ಯತೀಂದ್ರ ಪಾದುಕಾಭಿಖ್ಯಂ ವಂದೇ ದಾಶರಥಿಂ ಗುರುಮ್ ॥

ಶ್ರೀ ಯದುಶೈಲದಲ್ಲಿ ಅನೇಕ ಉತ್ಸವ ಕೈಂಕರ್ಯಗಳು ಅಂದರೆ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ ಸಂವತ್ಸರೋತ್ಸವಗಳು ನಡೆಯುತ್ತವೆ. ಯಾತ್ರಾರ್ಥಿಗಳು ದಕ್ಷಿಣ ಬದರಿಕಾಶ್ರಮವೆಂದು ಇಲ್ಲಿಗೆ ಬಂದು ಭಗವಂತನ ದರ್ಶನವನ್ನು ಮಾಡಿ ಕೃತಾರ್ಥರಾಗುತ್ತಾರೆ. ವೈರಮುಡಿ, ರಾಜಮುಡಿ, ಅಮ್ಮನವರ ವರ್ಧಂತ್ಯುತ್ಸವಗಳು ಸಸಂಭ್ರಮವಾಗಿ ನಡೆಯುತ್ತವೆ ಆದರೆ ಆಚಾರ್ಯ ರಾಮಾನುಜರ ತಿರುನಕ್ಷತ್ರ ಉತ್ಸವದ ಪರಿಯೇ ಬೇರೆ,

ಆಚಾರ್ಯರ ಮುಖೇನ ನಾವು ಏನೊಂದನ್ನು ಅರಿತಿರುವೆವೊ ಅದೇ ನಮ್ಮ ಅಂತರಂಗದಲ್ಲಿ ಶಾಶ್ವತವಾಗಿ ಅಂಕಿತವಾಗಿರುತ್ತೆ. ಶ್ರೀವೈಷ್ಣವನೆಂದು ಪ್ರತಿಪಾದ್ಯನಾಗಿ, ವಿಶಿಷ್ಟಾದ್ವೈತ ನಿರೂಪಕನಾಗಿ, ಸನಾತನ ಧರ್ಮ ಸಂಸ್ಥಾಪಕನಾಗಿ ಜಾತಿ–ಮತ–ಧರ್ಮ, ಕೀಳು–ಮೇಲು, ಸ್ತ್ರೀ–ಪುರುಷರೆಂಬ ಪ್ರಾಕೃತ ದೇಹ ಭಯವಿಲ್ಲದ ಉದಾತ ಹೃದಯ ವೈಶಾಲ್ಯದಿಂದೊಡಗೂಡಿದ ಮಹಾತ್ಮನಲ್ಲದೆ ಮತ್ತಾರು ಆಚಾರ್ಯ ಸಾರ್ವಭೌಮನಾಗಲರ್ಹನು ?

ಅವನ ತಿರುನಕ್ಷತ್ರವು ಅನೇಕ ಸ್ಥಳದಲ್ಲಿ ವಿವಿಧ ವೈಭವಯುಕ್ತವಾಗಿ ನಡೆಯುತ್ತದೆ. ಆದರೆ ಈ ಯದು ಶೈಲದಲ್ಲಿ ನಡೆಯುವ ಪರಿಯೇ ಬೇರೆ ! ಶಕ ವರ್ಷ 1017 ರಲ್ಲಿ ಶ್ರೀ ಪೆರುಂಬೂದೂರಿನಲ್ಲಿ ಜನ್ಮವೆತ್ತಿ, ಗುರುಕುಲದಲ್ಲಿ ವೇದ ವೇದಾಂಗ, ಇತಿಹಾಸಾದಿ ದರ್ಶನ ಶಾಸ್ತ್ರಗಳ ಅಧ್ಯಯನಮಾಡಿ ಸ್ವಯಂ ಪ್ರತಿಭಾಪ್ರಕಾಶದಿಂದ ಗುರುಕೋಪಕೆ ಭಾಜನರಾದರು.

ಅನಂತರ ಆಳವಂದಾರವರ ಕೃಪೆಗೆ ಪಾತ್ರರಾಗಿ "ಗುರು" ಪಾರಿಜಾತಾ ಶ್ರಿತಂ 'ಭಾಗ್ಯರತ್ನಂ' ಎಂದು ಕಾಂಚೀಪುರದಲ್ಲಿ ವರದರಾಜರ ಸೇವಾ ಕೈಂಕರ್ಯಾದಿಗಳ ಮೂಲಕ ಅಲ್ಲಿ ವಿದ್ಯಾ ಸಂಪತ್ತುಳ್ಳವರಾಗಿ ಪಾರಿಜಾತ ಕಲ್ಪ ವೃಕ್ಷದಂತೆ ಬ್ರಹ್ಮವಿದ್ಯಾಧನ ಪ್ರದವಾದುದರಿಂದ ಶ್ರೀ ಹಸ್ತಿಶಿಖರೋಜ್ವಲ ಪಾರಿಜಾತವನ್ನಾಗಿ ವರದರಾಜರನ್ನ ರೂಪಿಸಿಕೊಂಡ ಬಳಿಕ ಇಂತಹ ಬ್ರಹ್ಮವಿದ್ಯಾ ಸಾಮ್ರಾಜ್ಯಕ್ಕನುಗುಣವಾದ, ಶಿರೋಧಾರ್ಯವಾದ–

'ತಸ್ಯಾನ್ವವಾಯೇ ರಾಜಾನಃ ಕ್ರಮಾದ್ಯೇನಾಭಿಷೇಚಿತಾಃ'

ಈ ಕಿರೀಟದ ರತ್ನ ಶ್ರೇಷ್ಠವನ್ನು ಸಂಪಾದಿಸಿಕೊಳ್ಳೋಣವೆನ್ನುವ ಕಾಲದಲ್ಲಿ, ನಾನೇ ಅಂತಹ ಅಮೂಲ್ಯ ಭಾಗ್ಯರತ್ನ, ನನ್ನನ್ನೇ ಶಿರೋಧಾರ್ಯವನ್ನಾಗಿ ಅಂಗೀಕರಿಸು ಎಂದು ಶ್ರೀರಂಗನಾಥನು (ಮಹಾಪೂರ್ಣ) ಪೆರಿಯನಂಬಿ

ಗಳೆಂಬ ಆಚಾರ್ಯರ ಮುಖೇನ ಪ್ರೇರಿಸಿ, ವರದರಾಜನ ಕೃಪೆಯಿಂದ ಅಧಿಕವಿದ್ಯರಾದ ಈ ರಾಮಾನುಜರೇ ಮುಂದೆ ದರ್ಶನ ಸ್ಥಾಪಕರಾಗಿ 'ಶ್ರುತಿ, ಸ್ಮೃತಿ ಸೂತ್ರಾಂತ ಸ್ವಾಪರೂಪ ಜ್ವರ ನಿವಾರಕರಾಗಬೇಕೆಂದು ಸಂಕಲ್ಪಿಸಿ ಪ್ರಥಮಾಚಾರ್ಯನಾಗಿ, ಶ್ರೀಸ್ತನಾಭರಣಂತೇಜ ಶ್ರೀ ರಂಗೇಶಯಂ ಮಾಶ್ರಯೇ'' ಎಂಬ ಗುರುಪರಂಪರಾಕ್ರಮದಿಂದ ಬಂದ ಆಳವಂದಾರ್ ಶಿಷ್ಯರಾದ ಮಹಾಪೂರ್ಣರಿಂದ ಪಂಚ ಸಂಸ್ಕಾರಗಳನ್ನು ಪಡೆದರು.

''ಸಹಿ ವಿದ್ಯಾತಸ್ತಂ ಜನಯತಿ ತಚ್ಛ್ರೇಷ್ಠಂ ಜನ– ಶರೀರಮೇವ ಮಾತಾ–ಪಿತಾ ಜನಯತಃ ''

ಎಂಬ ಆಪಸ್ತಂಬಾದಿ ಶ್ರೀ ಸೂಕ್ತಿಯಂತೆ ಈ ರಾಮಾನುಜರನ್ನು 'ಅಪ್ಪನಾನ್ ಪಿರಂದಿಲ್ಲೇನ್ ಪಿರಂದ ಪಿನ್ ಮಾರಂದಿಲೇ' ಎಂದು ಜ್ಞಾನ ಪುತ್ರನನ್ನಾಗಿ ಅನುಗ್ರಹಿಸಿದ ಕಾರಣ ವರದರಾಜ ಮತ್ತು ಶ್ರೀರಂಗರಾಜರ ಭಾಗ್ಯ ಭೋಗವನ್ನು ಪಡೆದರು.

'ಗುರುಂ ಪ್ರಕಾಶಯೇದ್ಧೀಮಾನ್' ಎಂದು ಈ ಈರ್ವರಿಂದ ಜ್ಞಾನ ಪ್ರದರಾದ ಕಾರಣ ಯತಿ ಸಾರ್ವಭೌಮನು ವೇದಾಂತ ಗ್ರಂಥತ್ರಯಾದಿ ಮುಖೇನ ಭಗವಂತನನ್ನ ಕೊಂಡಾಡಿ ಹಿಂದುಳಿದವರಿಗೂ ಆಚರಣೆಯ ಒಗ್ಗೆ ಪ್ರತಿಪಾದಿಸಿ ಲೋಕೋತ್ತಾರಕಾಚಾರ್ಯರಾದರು. ಇಷ್ಟೆಲ್ಲಾ ಸಂಪಾದಿಸಿದರೂ ತಮ್ಮನ್ನ ಆಶ್ರಯಿಸಿದವರ ಭವತಾಪ ನಿವೃತ್ತಿ ಇಲ್ಲದೆ ಈ ಸಂಪತ್ತನ್ನು ಹೇಗೆ ಅನುಭವಿಸುವುದೆಂದು 'ಪರ ದುಃಖ ದುಃಖಿತ್ವ, ಎಂಬ ನಿರ್ಹೇತುಕ ಕೃಪೆಯಿಂದ ಆಲೋಚಿಸಿ ತಾಪಾಪಹಾರಕ ಸುಶ್ಲಿಷ್ಟ ಪದವಿದ 'ಪತಿಂವಿಶ್ವಸ್ಯಾತ್ಮೇಶ್ವರಂ, ಎಂಬ ಉನ್ನಡಿ ಕೀಳ ಅಮರನ್ದು ಪುಕುಂದೇನೇ, ಎಂಬ ನ್ಯಾಯದಂತೆ ಅನನ್ಯಾರ್ಹಶೇಷತ್ವ, ಅನನ್ಯ ಶರಣತ್ವ, ಅನನ್ಯ ಭೋಗತ್ವಗಳನ್ನು ಹೊಂದಿರುವ ಶ್ರೀ ದೇವಿಯಂತೆ ತಾನೂ ಅವಲಂಬಿಸಿ ಶಿಷ್ಯರನ್ನು ಉದ್ಧಾರ ಮಾಡುತ್ತಿದ್ದರು. ಆ ಕಾಲದ ಪರಿಸ್ಥಿತಿ ಅಷ್ಟು ಸಮರ್ಪಕವಾಗಿರಲಿಲ್ಲ.

''ಶ್ರುತಿಃ ನಷ್ಟಾ ಸ್ಮೃತಿಃ ಲುಪ್ತಾ
ಪ್ರಾಯೇಣ ಪತಿತಾ ದ್ವಿಜಾಃ ಅಂಗಾನಿಚ ವಿಶೀರ್ಣಾನಿ
ಹಾಮ್ಯದ್ಧ್ಯೋ ವರ್ಧತೇ ಕಲಿಃ''

ರಾಜರು ಶೈವ-ಶಾಕ್ತ ಮಾಯಾವಾದಿಗಳ ಬಲೆಯಲ್ಲಿ ಬಂಧಿತರಾಗಿದ್ದರು. ಕ್ರಿಮಿಕಂಠ ಚೋಳನೆಂಬ ರಾಜನು ಆ ಕಾಲದಲ್ಲಿ ಬಹಳ ಕ್ರೂರನಾಗಿ ಆಚಾರ್ಯರಿಗೆ ಅನೇಕ ವಿಧ ಹಿಂಸೆಗಳನ್ನು ಕೊಡಲಾರಂಭಿಸಿದನು ಕೊನೆಗೆ ಆಚಾರ್ಯರು ಧರ್ಮವಿಸ್ತರಣೆಗಾಗಿಯೂ ಮತ್ತು ಹಿಂದುಳಿದವರನ್ನು ಉದ್ಧಾರ ಮಾಡುವುದಕ್ಕಾಗಿಯೂ ಮೇಲ್ನಾಡಿಗೆ (ಮೈಸೂರು ದೇಶಕ್ಕೆ) ಆಗಮಿಸಿದರು.

"ರಾಮಾನುಜ ಮುನಿರಾಡವತಾರಂ. ಮಾಂ ಕಾಂಧಾನಪಿ ಮೋಕ್ಷಯಿತಾರಂ" ಎಂಬಂತೆ ನವರತ್ನ ರೂಪವಾದ ಗ್ರಂಥಗಳನ್ನು ರಚಿಸಿ, ವೇದಾಂತ, ವಿಜ್ಞಾನ ಸುನಿಶ್ಚಿತಾರ್ಥಃ" ಎಂಬ ಬ್ರಹ್ಮವಿದ್ಯಾ ರೂಪವಾದ ಅತಸ್ಕರಗ್ರಾಹ್ಯ ಸಂಪತ್ತಿಗೆ ವಾರಸುದಾರನು "ಮೋಕ್ಷಯಿಷ್ಯಾಮಿ" ಎಂದು ಸಂಕಲ್ಪಿಸಿದ ಕೃಷ್ಣನಿಗೂ "ಅರ್ಚಿತಃ ಕೃಷ್ಣರಾಮಾಭ್ಯಾ" ಎಂಬ ಯಾದವಗಿರಿ ವಚನದಂತೆ ಅರ್ಚ್ಯನಾಗಿ ಯದುಶೈಲದಲ್ಲಿ ಭವತರಣ ನೌಕಾಮಾರ್ಗ ದರ್ಶಕನಾದ ಯದುಶೈಲ ದೀಪನನ್ನೇ ಉತ್ತರಾಧಿಕಾರಿಯಾಗಿ ಪಡೆದರು. ತಾನೂ ಇಲ್ಲಿಯೇ "ತಾನುಹಂದ ತಿರುಮೇನಿ" ರೂಪವಾಗಿ ನೆಲೆಗೊಂಡರು. ಹೀಗೆ " ಯತಿಶೈಲದೀಪಃ " ಎಂದು ಯದುಶೈಲ ದೀಪನೇ ಯತಿರಾಜ ಸಾರ್ವಭೌಮ ಸಂಪತ್ತಿಗೆ ಸುತನಾದನು.

"ಶ್ರೀ ಯಾದವಾದ್ರಿ ವಸತಿಂ ಸತತಂ ಭಜಂತಃ –
ಸಂತೋ ಭವಂತಿ ಮಮ ಸಂತತಿ ಮೂಲನಾಥಾಃ ॥"

ಎಂದು ಶ್ರೀ ಯತಿರಾಜ ಪಟ್ಟಾಭಿಷೇಕಕ್ಕೆ ಎಲ್ಲಾ ಕ್ಷೇತ್ರಗಳಿಂದಲೂ ಶ್ರೇಷ್ಠವಾದ ಯಾದವಾಚಲವು ಅತ್ಯಂತ ಪ್ರಿಯವು. ಏಕೆಂದರೆ ಶ್ರೀ ಯತಿರಾಜ ಪಟ್ಟಾಭಿಷೇಕಕ್ಕೆ ತಕ್ಕ ಯುವರಾಜನಾದ, ಇವರಿಗೆ ಅತಿ ಪ್ರಿಯನಾದ ಶೆಲ್ವಪಿಳ್ಳೆಯು ನೆಲೆಸಿರುವವನಾದುದರಿಂದಲೂ ತಾನೂ "ತಾನುಹಂದ ತಿರುಮೇನಿ" ಎಂದು ಇಲ್ಲಿ ನೆಲೆಸಿ "ಅಷ್ಟೋತ್ತರ ಶತಸ್ಥಾನ ಸಾರೇ ಯಾದವ ಭೂಧರೇ" ಎಂಬಂತೆ ಶ್ರೀ, ಭೂ, ನೀಳಾ ಸಹಿತ ಸಂಪತ್ಕುಮಾರನಿಗೆ ಸಕಲ ಭೋಗಗಳನ್ನು ನಡೆಸಿ ವಿಭೂತಿ ದ್ವಯ ನಾಯಕನಾಗಿ ಆ ಭೋಗ್ಯಶೇಷವನ್ನು ತಾನೂ ಅನುಭವಿಸಿರುವುದರಿಂದ ಇಂತಹ ಪರಮಕೃಪಾ ಭರಿತ ಪ್ರಪನ್ನಾಚಾರ್ಯರ ಅವತಾರ ದಿನವು ಸರ್ವಶ್ರೇಷ್ಠವಾಗಿರುತ್ತೆ.

ತಿರುನಕ್ಷತ್ರ ವೈಭವಗಳು :–

ಶ್ರೀ ರಾಮಾನುಜರ ತಿರುನಕ್ಷತ್ರವು 10 ದಿನ ಪರ್ಯಂತ ನಡೆಯುತ್ತದೆ. ಬೆಳಿಗ್ಗೆ ಸುಪ್ರಭಾತದ ನಂತರ ಕಲ್ಯಾಣಿಯಿಂದ ಮಂಗಳವಾದ್ಯಗಳ ಜೊತೆ ವೈದಿಕೋತ್ತಮರು ಬೆಳ್ಳಿಯ ಕಂಭಗಳಲ್ಲಿ ತಿರುಮಂಜನಕ್ಕೆ ಸ್ತೋತ್ರರತ್ನ ಘೋಷದೊಡನೆ ತೀರ್ಥವನ್ನು ತರುತ್ತಾರೆ.

ಶ್ರೀ ತಿರುನಾರಾಯಣ ಸ್ವಾಮಿಗೆ ಆರಾಧನ, ಸಹಸ್ರನಾಮ, ತೀರ್ಥಪ್ರಸಾದ ನಿವೇದನ, ಅಮ್ಮನವರ ಸನ್ನಿಧಿಯಲ್ಲಿ ನಿತ್ಯಗಟ್ಟಲೆ ಆದ ನಂತರ ಮಂಗಳವಾದ್ಯ ಸಮೇತ ಆಚಾರ್ಯರ ಸನ್ನಿಧಿಯಲ್ಲಿ ಅಭಿಷೇಕವು ಮಂತ್ರಘೋಷಗಳೊಡನೆ ನಡೆಯುತ್ತೆ. ಭಕ್ತಾದಿಗಳು, ಸ್ತ್ರೀ-ಪುರುಷರಾದಿಯಾಗಿ ಬಂದು ಪ್ರಸನ್ನ ಕಲಿಯೋದ್ಧಾರಕನಾದ ಆಚಾರ್ಯರ ದರ್ಶನ ಮಾಡುತ್ತಾರೆ. ಅರೆಯರ್‌ರವರು ಭಗವಂತನ ಲೀಲಾಗುಣವನ್ನು, ಆಳ್ವಾರ್ ಆಚಾರ್ಯರುಗಳ ಸಿರಿನುಡಿಗಳನ್ನು ರಾಗ–ತಾಳ–ಲಯಗಳೊಂದಿಗೆ ಹಾಡುತ್ತಾರೆ.

ಅಭಿಷೇಕದ ಸಮಯದಲ್ಲಿ ಭಗವದ್ರಾಮಾನುಜರ ದಿವ್ಯಾಂಗ ಸೌಂದರ್ಯ, ಲಾವಣ್ಯ ಲಾಲಿತ್ಯವನ್ನ ಅವರ ಗುಣಕಥನಾಮೃತವನ್ನು ಸ್ಪಷ್ಟವಾಗಿಯೂ, ಚಿತ್ತಾಕರ್ಷಕವಾಗಿಯೂ, ಭಕ್ತಿಯುತವಾಗಿಯೂ ವರ್ಣಿಸುತ್ತಾರೆ. ಅವರ ಶ್ರೀಕಂಠದಿಂದ ಆಚಾರ್ಯರ ಸೌಂದರ್ಯ ಸೌಶೀಲ್ಯಾದಿ ಗುಣಗಳು ವಾಗ್ಝರಿಯಂತೆ ಹೊರ ಹೊಮ್ಮುತ್ತೆ. ಇದೇ ಸಮಯದಲ್ಲಿ ನಾರಾಯಣಸ್ವಾಮಿ ಸನ್ನಿಧಿಯಿಂದ ತೀರ್ಥ–ಪ್ರಸಾದ, ಶ್ರೀ ಶಠಗೋಪವು ಬರುತ್ತವೆ. ಅನಂತರ ಆಚಾರ್ಯರಿಗೆ ಶತಜ್ಯೋತಿಗಳಿಂದ ತಿರುವಂದಿಕ್ಕಾಪ್ಪು ಆಗುತ್ತದೆ. ಆಗಲೂ ಮಂಗಳಾಶಾಸನವಾಗುತ್ತೆ. ನೈವೇದ್ಯ ಶಾತ್ತು ಮರ್ರೈಯಾದ ನಂತರ ಭಕ್ತಾದಿಗಳಿಗೆ ತೀರ್ಥ–ಪ್ರಸಾದ ವಿನಿಯೋಗವಾಗುತ್ತೆ.

ದೇವಸ್ಥಾನದ ಅಧಿಕಪಡಿ, ನಿತ್ಯಪಡಿಗಳು ಯಥಾಕ್ರಮವಾಗಿ ನಡಿಯುತ್ತೆ. ದೇವಾಲಯದ ನಿತ್ಯ ಕೈಂಕರ್ಯ ತತ್ಪರರು ಸನಾತನ ಆಗಮ ಶ್ರುತಿ, ಸ್ಮೃತಿ ಪುರಾಣಗಳಿಗೆ ಲೇಶಮಾತ್ರವೂ ದೋಷ ಬರದಂತೆ ಕ್ರಮಾನುಸಾರ ಚನ್ನಾಗಿ ನಡೆಸುತ್ತಾರೆ.

ಬೆಳಿಗ್ಗೆ ಮತ್ತು ರಾತ್ರಿಯಲ್ಲಿ ರಾಮಾನುಜಾಚಾರ್ಯರಿಗೆ ವಾಹನಗಳಲ್ಲಿ ಉತ್ಸವವು ನಡೆಯುತ್ತೆ. ಭೂಸುರರು ದಿವ್ಯಮಂತ್ರ, ವೇದಘೋಷಗಳೊಡನೆ ಉತ್ಸವದ ಜೊತೆ ಬರುತ್ತಾರೆ, ಛತ್ರ ಚಾಮರ ಮರ್ಯಾದೆಗಳೊಡನೆ ಉತ್ಸವವು ವಿಜೃಂಭಣೆಯಿಂದ ನಡೆಯುತ್ತದೆ. ರಾತ್ರಿಯಲ್ಲಿ ಯಥಾಪ್ರಕಾರ ತಿರುವಾರಾಧನ, ಉತ್ಸವ

ವಾಹನಾದಿಗಳು ನಡೆಯುತ್ತವೆ. ರಾಮಾನುಜರಿಗೂ ಸಂಪತ್ಕುಮಾರನಿಗೆ ನಡೆಯುವಂತೆಯೇ ವಜ್ರವೈಡೂರ್ಯದ ಮುಡಿ, ಪಲ್ಲಕ್ಕಿ, ವಾಹನ ಅನಂತರ ರಥೋತ್ಸವವು ನಡೆದು ಶಿಷ್ಯವೃಂದವು ಸಂತೃಪ್ತಿಯನ್ನು ಹೊಂದುತ್ತದೆ. ಇಲ್ಲಿ ಮತ್ತೊಂದು ವಿಶೇಷವೇನೆಂದರೆ ಅಧಿಕಸಂಖ್ಯೆಯಲ್ಲಿ ಸ್ತ್ರೀಯರೇ ರಾಮಾನುಜರ ರಥವನ್ನು ಸಂಸ್ಥಾನದವರೆಗೆ ಸೇರಿಸುತ್ತಾರೆ.

ತಿರುನಕ್ಷತ್ರದ ದಿನ ಎಲ್ಲೆಲ್ಲೂ ಸಂಭ್ರಮ. ಯಾದವಾಚಲದಲ್ಲಿ ಪ್ರಕೃತಿ ಮಾತೆಯೂ ಸಹ ಪ್ರಫುಲ್ಲಿತಳಾಗಿ, ಪ್ರಶಾಂತಳಾಗಿರುತ್ತಾಳೆ. ತಂಗಾಳಿಯು ಮಂದ ಮಂದವಾಗಿ ಬೀಸುತ್ತಿರುತ್ತೆ. ಜನರ ಹೃತ್ಕಮಲವು ಭಕ್ತಿಯೆಂಬ ರಶ್ಮಿಯಿಂದ ವಿಕಸಿತವಾಗಿರುತ್ತೆ.

ಬ್ರಾಹ್ಮಣೋತ್ತಮರು ದ್ವಾದಶೋರ್ಧ್ವ ಪುಂಡ್ರಗಳಿಂದಲಂಕೃತರಾಗಿ ಶುಭ್ರ ವಸ್ತ್ರಗಳನ್ನು ಧರಿಸಿ ಅತಿ ಆತುರವಾಗಿ ಭಗವದ್ರಾಮಾನುಜರ ಕೈಂಕರ್ಯಕ್ಕೆ ಹೋಗುತ್ತಿದ್ದಾರೆ. ಸ್ತ್ರೀಯರು ಆಗಮಿಸಿರುವ ಅತಿಥಿ ಸತ್ಕಾರ ಮಾಡುತ್ತಾ ಭಗವದ್ದರ್ಶನಕ್ಕೆ ಹೊರಟಿದ್ದಾರೆ ಚಿಕ್ಕ ಹುಡುಗರು ವೇದ-ವೇದಾಂಗಗಳ ಅಧ್ಯಯನದಲ್ಲಿ ಆತುರರಾಗಿ ಉಭಯ ವೇದಾಂತ ಸಭೆಯಲ್ಲಿ ಬಹುಮಾನ ಪಡೆಯಲು ಕಾತರರಾಗಿರುತ್ತಾರೆ.

ಜಾತಿ-ಮತಗಳ ಕೀಳು, ಮೇಲು ಭಾವನೆ ಇಲ್ಲದ ಪ್ರತಿಯೊಬ್ಬ ಭಕ್ತರೂ ದರ್ಶನಾಕಾಂಕ್ಷೆಯಿಂದ ದೇವಾಲಯದಲ್ಲಿ ನೆರೆದಿರುತ್ತಾರೆ ತಿರುನಕ್ಷತ್ರದದಿನ ಆಚಾರ್ಯರಿಗೆ ಹನ್ನೆರಡು ಅಭಿಷೇಕ, ಹನ್ನೆರಡು ಆರಾಧನೆಗಳು ನಡೆಯುತ್ತವೆ ನೋಡಿದ ನೇತ್ರಯುಗ್ಮವು ಸಾರ್ಥಕವಾಗಿ 'ಕಂಡಕಣ್‌ಗಳ್ ಮತ್ತೊನ್ರಿನೈ ಕಾಣಾವೇ' ಎಂದೆನಿಸುತ್ತದೆ.

ಯತಿರಾಜ ಸನ್ನಿಧಿಯ ಭಟ್ಟರುಗಳು, ಛಾತ್ರರುಗಳೂ ಆಚಾರ್ಯರಿಗೆ ಸ್ವಲ್ಪವೂ ಶ್ರಮವಾಗದ ರೀತಿಯಲ್ಲಿ ಹಾಲು, ಮೊಸರು, ಘೃತ ಮಧು, ಮುಂತಾದ ಮಂಗಳದ್ರವ್ಯಗಳಿಂದ ಅಭಿಷೇಕವನ್ನು ಮಾಡಿ ಆಚಾರ್ಯರ ಅಕ್ಕ ಪಕ್ಕಗಳಲ್ಲಿ ಬೆಳ್ಳಿಯ ಶಂಖ-ಚಕ್ರಗಳಿಂದ ತೀರ್ಥವನ್ನು ಅರ್ಪಿಸುತ್ತಾರೆ. ಅವರ ಮನೆತನದ ಚಿಕ್ಕವರಾದ ಸೋದರರು ಸಹಸ್ರಧಾರೆಯ ತಟ್ಟೆಯನ್ನು ಹಿಡಿದು ತೀರ್ಥ, ದೀಪ, ಫಲ-ಪುಷ್ಪ ತಾಂಬೂಲವನ್ನು ಒದಗಿಸುತ್ತಾರೆ.

ಲೇಶಮಾತ್ರ ತಡವಾದರೆ ಆಚಾರ್ಯರಿಗೆ ಆಲಸಿಕೆಯಾಗುವುದೆಂಬ ಭಾವನೆ ಆಚಾರ್ಯಾಶ್ರಿತ ವರ್ಗದವರ ಹೃದಯದಲ್ಲಿ ಹುದುಗಿರುವುದು. ಅವರ ಪ್ರತಿಯೊಂದು ಕೈಂಕರ್ಯದಲ್ಲಿಯೂ ಎದ್ದು ಕಾಣುತ್ತೆ. ತಿರುಮಂಜನದ ಅನಂತರ ಆಚಾರ್ಯರ ಶರೀರವ ತೇವವನ್ನು ಒತ್ತುವಾಗ ಹಿತೈಷಿಯಾದ ಪ್ರೀತಿಪಾತ್ರನಾದ ಪಿತನಿಗೆ ಮಾಡುವ ಶ್ರದ್ಧಾಯುತವಾದ ಸೇವೆಯ ಹಾಗೂ, ಅಲಂಕಾರ ಮಾಡುವಾಗ ತನ್ನ ಪ್ರಿಯನಿಗೆ ಮಾಡುವ ಮಮತೆಯ ಷೋಡಶೋಪಚಾರದ ಹಾಗೂ, ನೈವೇದ್ಯ ಮಾಡುವಾಗ ವಾತ್ಸಲ್ಯಭಾವದಿಂದ ಹಸಿದು ಬಂದ ಬಾಲಕನಿಗೆ ಪ್ರೇಮಾದರದಿಂದ ಊಟ ಬಡಿಸುವಂತೆ ತೋರುತ್ತೆ.

ಅಷ್ಟರಲ್ಲಿ ಅರೆಯರ್‌ರವರು ತಾಲಾಟ್ಟನ್ನು ಹೇಳುತ್ತಾರೆ. ಅಲ್ಲಿ ನಿಂತ ಭಗವದ್ಭಕ್ತರು ಈ ಆದರೋಪಚಾರಗಳ ಸಂಭ್ರಮದಲ್ಲಿ ತಮ್ಮನ್ನೇ ತಾವು ಕ್ಷಣಮಾತ್ರ ಮೈಮರೆತು ಮಾಯಾ-ಮೋಹವೆಂಬ ಸಂಸಾರ ಬಂಧನದಿಂದ ವಿಮುಕ್ತರಾಗಿ, ಆಚಾರ್ಯರ ಸೌಂದರ್ಯ, ಸೌಶೀಲ್ಯಾದಿಗುಣಗಳ ಮನನ ಚಿಂತನೆಯಲ್ಲಿ ಮಂತ್ರಮುಗ್ಧರಾಗಿರುತ್ತಾರೆ.

ಇಷ್ಟರಲ್ಲಿ ಶಾಂತ, ಕರುಣಾಕೃಪಾಸಾಗರರಾದ ಉಡೈಯವರ್ ಶ್ರೀಗಂಧಲೇಪನದಿಂದ ಅಲಂಕೃತರಾಗಿ ಸರ್ವರ ಹೃದಯ ತಾಪಾಪಹಾರಕರಾಗಿ ದರ್ಶನವೀಯುತ್ತಾರೆ.

ಶ್ರೀ ಮನ್ನಾರಾಯಣಸ್ವಾಮಿ ಸನ್ನಿಧಿಯಿಂದ ಆಚಾರ್ಯರಿಗೆ ತೀರ್ಥ ಪ್ರಸಾದ, ಪರಿವಟ್ಟಗಳು ಮಂಗಳ ವಾದ್ಯ ಸಮೇತ ಬರುತ್ತೆ. ಅನಂತರ ಭಕ್ತಾದಿಗಳಿಗೆ ತೀರ್ಥ–ಪ್ರಸಾದ ವಿನಿಯೋಗವಾಗುತ್ತೆ.

ವೇದವೇದಾಂತಗಳಿಂದ ಪ್ರತಿಪಾದ್ಯವಾಗಿ ಅದ್ವೈತ, ದ್ವೈತ, ಶುದ್ಧ ದ್ವೈತಗಳಲ್ಲಿ ಅಡಗಿರುವ ತತ್ವಕ್ಕೆ ಮೇಲಾದ ವಿಶಿಷ್ಟಾದ್ವೈತವನ್ನು ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಪ್ರಸಾದಿಸಿ–

"ನಾರಾಯಣ ಪರಂಬ್ರಹ್ಮ ತತ್ತ್ವಂ ನಾರಾಯಣ ಪರಃ ।
ತತ್ತ್ವಂ ಜಿಜ್ಞಾಸಮಾನಾನಾಂ ಹೇತುಭಿಸ್ಸರ್ವತೋ ಮುಖೈಃ ।
ತತ್ತ್ವಮೇಕೊ ಮಹಾಯೋಗೀ ಹರಿರ್ನಾರಾಯಣಃ ಪರಃ ॥

ಎಂದು ಅಶೇಷ ಚಿದಚಿದ್ವಿಶಿಷ್ಟನಾದ ಶ್ರೀಮನ್ನಾರಾಯಣನೊಬ್ಬನೇ ತತ್ತ್ವ ಎಂದು ಸಕಲ ವೇದಶಾಸ್ತ್ರ ಸ್ಮೃತೀತಿಹಾಸ ಪುರಾಣಗಳ ಸಿದ್ಧಾಂತ ಸಾರವಾಗಿ ವಿಶಿಷ್ಟಾದ್ವೈತ ಸಿದ್ಧಾಂತವನ್ನು ಸ್ಥಾಪಿಸಿದರು. ಈ ಸಂದರ್ಭದಲ್ಲಿ ಅಮ್ಮನವರ ಸನ್ನಿಧಿಯ ಮುಂಭಾಗದಲ್ಲಿ ಬಂದು ವಿದ್ವತ್ ಮಹಾಸಭೆ ನಡೆಯುತ್ತದೆ. ಉಭಯ ವೇದಾಂತ ಸಭೆಯವರು ವೇದ ವೇದಾಂತಗಳಲ್ಲಿ ಉತ್ತೀರ್ಣರಾದ ಬಾಲಕರಿಗೆ, ತರ್ಕಶಾಸ್ತ್ರಜ್ಞರಾದ ಯುವಕರಿಗೆ ಪಾರಿತೋಷಕವನ್ನು ನೀಡುತ್ತಾರೆ. ಮಹಾನ್ ಪಂಡಿತೋತ್ತಮರು ಅತ್ಯುತ್ತಮ ವಿಷಯಗಳ ಸಾರಸಂಗ್ರಹವನ್ನು ವ್ಯಾಖ್ಯಾನ ಮಾಡುತ್ತಾರೆ ಈ ಸಭೆಯಲ್ಲಿ ವಿದ್ವಾಂಸರು, ಸನಾತನ ಧರ್ಮದಲ್ಲಿ ಆಸಕ್ತಿಯುಳ್ಳವರು ಮತ್ತು ಸಂಪ್ರದಾಯಸ್ಥರೂ ಭಾಗವಹಿಸಬೇಕಾದದ್ದು ಅತ್ಯಾವಶ್ಯಕ.

ವಿದ್ವತ್ಸಭೆಯಾದ ನಂತರ ಹರ್ಷಚಿತ್ತರಾದ ಬಾಲಕರೂ, ವೃದ್ಧರೂ ಶೀತಲ ಶ್ರೀಗಂಧದಿಂದ ಲೇಪಿತರಾದ ಆಚಾರ್ಯರನ್ನು ಕಲ್ಯಾಣಿಯ ಹತ್ತಿರದ ಸೀತಾರಣ್ಯಕ್ಕೆ ಪಲ್ಲಕ್ಕಿಯಲ್ಲಿ ಬಿಜಮಾಡಿಸಿಕೊಂಡು ಹೋಗುತ್ತಾರೆ. ಆಗಿನ ಅಪೂರ್ವ ದೃಶ್ಯ ಎಂತಹ ನಾಸ್ತಿಕನನ್ನಾದರೂ ಕ್ಷಣಮಾತ್ರ ತನ್ನೆಡೆಗೆ ಆಕರ್ಷಿಸಲಿರಲಾರದು. ಆಗ ಆಚಾರ್ಯನ ದರ್ಶನವನ್ನು ಭಗವದ್ಭಕ್ತರು ಈ ರೀತಿ ಅನುಭವಿಸಬಹುದು.

ಇಹಲೋಕದ ಕರ್ಮಬಂಧದಿಂದ ವಿಮುಕ್ತನಾಗಿ, ನಿರಾತಂಕವಾಗಿ ತನ್ನ ಮಾನವಜನ್ಮದ ಸಾಫಲ್ಯವನ್ನು ಪೂರ್ಣಗೊಳಿಸಿ ಮಂದಸ್ಮಿತನಾಗಿಯೂ ಧೀರೋದಾತ್ತನಾಗಿಯೂ, ದೃಢಮನಸ್ಕನಾಗಿಯೂ ಜವಾಬ್ದಾರಿಯನ್ನು ಹೊರುವಂತಹವರಿಗೆ ವಹಿಸಿರುವ ಪ್ರತಿಭಾ ಸಂಪನ್ನನಾಗಿ ಕಾಣುತ್ತಾನೆ.

ದರ್ಶಕರ ಮನೋಭಾವಗಳು ಅನಂತಪರಿ, ಅನುಭವಿಸುವ ಆತ್ಮ ಶರೀರನಿಗೆ ವಶನಾದರೆ ಈ ಅಂತರಂಗ ಸುಖ ಅವನಿಗೆ ದೊರೆಯಲಾರದು. ಆದರೆ ಮುಮುಕ್ಷಾಕಾಂಕ್ಷಿಯಾದ ಜೀವಿಯು ಚಂದನಲೇಪಿತ ಕರುಣಾಮೂರ್ತಿಯಾಗಿ ಕಂಗೊಳಿಸುವ ಅಂಜಲೀಬದ್ಧನಾದ ಆಚಾರ್ಯನನ್ನು ಹಿಂಬಾಲಿಸುತ್ತಾನೆ, ಹಿಂದೊಂದು ಸಾರಿ ಗೋಪುರವ ಮೇಲೇರಿ ಗುರುಕೋಪಕ್ಕೆ ಪಾತ್ರರಾದರೂ ಸರಿ, ತಾವು ನರಕ ಭಾಜನರಾದರೂ ಸರಿ ಪಾಮರರಾದ ಮಾನವ ಕೋಟಿಯ

ಉದ್ಧಾರಕ್ಕೆಂದು ಅಷ್ಟಾಕ್ಷರ ಮಂತ್ರ ರಹಸ್ಯವನ್ನು ಉಪದೇಶಿಸಿ ತನ್ನವರನ್ನಾಗಿ ಮಾಡಿಕೊಂಡರೋ ಅಷ್ಟರಿಂದಲೆ ತೃಪ್ತರಾಗದೆ ಇನ್ನು ಮುಂದೆ ಮುಂದೆ ಅವರನ್ನು ಸ್ವಸ್ಥಾನಕ್ಕೆ ಕರೆದುಕೊಂಡು ಹೋಗಲು ಹೊರಟ ಸೇನಾನಿಯಂತೆ ತೋರುತ್ತಾರೆ.

ಸೀತಾರಣ್ಯದಿಂದ ಹಿಂತಿರುಗಿದ ಅನಂತರ ಶ್ರೀವೇದಾಂತಾಚಾರ್ಯರ ಮತ್ತು ಜೀಯರ್ ಸನ್ನಿಧಿಗಳಲ್ಲಿ ಆರಾಧನ ಅರ್ಚನಾದಿಗಳನ್ನು ಸ್ವೀಕರಿಸುತ್ತಾರೆ.

ಕರುಣಾನಿಧಿಯಾಗಿಯೂ, ಭಕ್ತರ ಮನೋವಾಂಛೆಗಳನ್ನು ಪೂರೈಯಿಸಲು ಕಂಕಣಬದ್ಧನಾಗಿರುವ ಶೆಲ್ವ ಪಿಳ್ಳೆಯು ಆಚಾರ್ಯರ ಮನಸ್ಸಂತೋಷಪಡಿಸುವ ಸಲುವಾಗಿ ತನ್ನ ದಶಾವತಾರ ದರ್ಶನವನ್ನು ಭಗವದ್ರಾಮಾನುಜರ ಅಪೇಕ್ಷೆಯು ಮೇರೆಗೆ ನೀಡುತ್ತಾರೆ. 'ಹೊವಿನೊಂದಿಗೆ ನಾರೂ ಸ್ವರ್ಗ' ಎಂಬಂತೆ ಆಚಾರ್ಯರ ಜೊತೆ ಶಿಷ್ಯಕೋಟಿಯೂ ಈ ಅಲಭ್ಯದರ್ಶನವನ್ನು ಪಡೆದು ಇಹಲೋಕದಲ್ಲಿ ಜನ್ಮ ಪಡೆದ ಸಾಫಲ್ಯವನ್ನು ಹೊಂದುತ್ತಾರೆ.

ಅನಂತರ ಹನ್ನೆರಡು ಆರಾಧನೆ, ದಿವ್ಯ ಪ್ರಬಂಧ ಪಠನೆಯಾಗುತ್ತೆ, ಶ್ರೀ ಶೆಲ್ವಪಿಳ್ಳೆ ಶ್ರೀ, ಭೂ ನೀಳಾದೇವಿಯರೊಂದಿಗೆ ತಮ್ಮ ನಿವಾಸಕ್ಕೆ ಅತ್ಯಂತ ವೈಭವ ಯುತವಾಗಿ ಬಿಜಮಾಡಿಸುತ್ತಾರೆ. ಆ ಸಂದರ್ಭವು ಸಾಕ್ಷಾತ್ ವೈಕುಂಠದಲ್ಲಿಯೇ ಇರುವ ಹಾಗೆ ಅನುಭವಗಮ್ಯವಾಗಿದೆ,

### ಭಗವದ್ರಾಮಾನುಜರ ಉಪದೇಶ ವಾಕ್ಯಗಳು—

1. ವಿಶಿಷ್ಟಾದ್ವೈತಕ್ಕಿಂತ ಮೇಲಾದ ದರ್ಶನವಿಲ್ಲ.
2. ಶ್ರೀಮನ್ನಾರಾಯಣನ ಚರಣಾರವಿಂದಗಳಿಗಿಂತ ಮೇಲಾದ ಮೋಕ್ಷೋಪಾಯವಿಲ್ಲ.
3. ಪ್ರಪನ್ನನಿಗೆ ದೇಹಾವಸಾನ ಕಾಲದಲ್ಲಿ ಮೋಕ್ಷಪ್ರಾಪ್ತಿಯು ನಿಶ್ಚಯ.
4. ಶ್ರೀ ವೈಷ್ಣವಾಪಚಾರಕ್ಕಿಂತ ಕ್ರೂರವಾದ ಮೋಕ್ಷ ವಿರೋಧ ಮತ್ತೊಂದಿಲ್ಲ.

ಈ ಮಹಾನುಭಾವರು ಬಹುಮುಖವಾಗಿ ಅಪ್ಪಣೆ ಕೊಡಿಸಿರುವ ಉಪದೇಶಗಳ ಸಾರಾಂಶವೆಂದು ಹೇಳ ಬಹುದಾಗಿದೆ,

ಸ್ವಚರಣ ಕಮಲಗಳಲ್ಲಿ ಆಶ್ರಯಿಸಿದ ಚೇತನರ ಉಜ್ಜೀವನಕ್ಕಾಗಿ ಹಿತೋಪದೇಶ ಮಾಡುವಾಗ ನಾಥ–ಯಾಮುನಾದಿ ಆಚಾರ್ಯವರ್ಯರಿಂದ ಅನುಷ್ಠಿತವಾದ ಸಿದ್ಧಾಂತವನ್ನು ಇವರು ವಿಶಿಷ್ಟ, ನಿಷ್ಕೃಷ್ಟ ಶಾಸ್ತ್ರ ವಿಷಯಗಳಲ್ಲಿ ಸುನಿಶ್ಚಿತ ಮಾರ್ಗವನ್ನು ತೋರಿಸಿ ಮಾರ್ಗದರ್ಶಿಗಳಾಗಿದ್ದಾರೆ,

'ರಾಮಾನುಜ ಪ್ರಪನ್ನಾಯೇ ರಕ್ಷಾಂ ವೀಕ್ಷ್ಯ ದಯಾನಿಧೇಃ ॥
ಕರಂ ವಕ್ಷಸಿ ನಿಕ್ಷಿಪ್ಯ ನಿದ್ರಾಂ ಕುರ್ವಂತಿ ನಿರ್ಭಯಾಃ ॥

ಎಂಬಂತೆ ರಾಮಾನುಜರನ್ನು ಆಶ್ರಯಿಸಿದವರು ನಿರ್ಭಯರೂ, ನಿರ್ಭರರೂ ಆಗಿ ಪರಮಾರ್ಥ ಲಾಭವನ್ನು ಪಡೆಯುತ್ತಾರೆ,

ಮನೋಜ್ಞವರಯೋಗೀಂದ್ರ ಮಾನಸಾಂಭೋಜ ಭಾನವೇ ।
ಯದುಶೈಲ ನಿವಾಸಾಯ ಯತಿರಾಜಾಯ ಮಂಗಳಮ್ ॥



# ತಿದ್ದುಪಡಿಗಳು

| | | ಅಶುದ್ಧ | ಶುದ್ಧ |
|---|---|---|---|
| ಪುಟ | 1 | ರ್ಥತ್ತ | ರ್ತ |
| | 3 | ಗನ್ನು | ಗಳನ್ನು |
| | 4 | ಹೊರ | ದೂರ |
| | 5 | ಣಾ | ದಾ |
| | 6 | ವ | ಮ |
| | | ನೇ | ನ್ನೇ |
| | | ರ | ರು |
| | 7 | ಪ | ಪಂ |
| | | ಶ | ಶಂ |
| | | ವೆ | ವೇ |
| | | ಗೊ | ಗೊಂಡು |
| | | ರ | ರು |
| | 8 | ಪ | ಪ್ರ |
| | | ದಾ | ಧಾ |
| | | ರೀಳಿ | ರೀತಿ |
| | | ಶ್ರರು | ಶ್ರಮ |
| | | ಅಕ | ಅಕ್ಷ |
| | 10 | ಗಂತಾ | ಗಂತೌ |
| | 11 | ಣಾಂ | ರ್ಣಾಂ |
| | 12 | ದೂ | ದಲಾ |
| | | ಕಾಸ್ತ್ರ | ಶಾಸ್ತ್ರ |
| | | ಭೋ | ಬೋ |
| | | ದಿ | ದ |
| | 13 | ಪೋತ್ | ಪೋಲ್ |
| | | ಯಂಂಗ್ನ | ಯಂಂಗ್ಮ |
| | | ಅಭಿ | ಅಳ |
| | | ದ | ದ್ರು |

| | | ಅಶುದ್ಧ | ಶುದ್ಧ |
|---|---|---|---|
| ಪುಟ | 13 | ಆಥಿ | ಆಳ |
| | 14 | ಆರ್ಥ | ಅರ್ಥ |
| | | ಸಿತ | ವಿಕಸಿತ |
| | | ತ್ರತೆ | ತ್ರದೆ |
| | 17 | ಠ | ರ |
| | | ಹೆ | ಹಿ |
| | | ದ | ದು |
| | 18 | ನನ | ನ |
| | | ವಿವಿಂ | ವೀದ |
| | 19 | ಉಧಿ | ಉದ್ಧವ |
| | 20 | ಲ್ಯ್ಕ | ಲ್ಯ್ಕಕ |
| | | ಬೇ | ಹೇ |
| | | ವೇ | ಮೋ |
| | .6 | ಣಿ | ರ್ಣಿ |
| | | ದೂ | ವ |
| | | ಮೀಮಾ | ಮೀಮಾಂಸ |
| | 29 | ತಪ | ತಳ |
| | 30 | ಮೋತ್ವಿ | ಮೊಳಿ |
| | | ತ್ವಿಜ್ಯ | ತ್ಯಾಜ್ಯ |
| | | ಶ್ರು | ರು |
| | | ಸಾತ್ಯಾ | ಸಾತ್ವಿ |
| | | ವೋಳಿರಿಯಾ | ತಿರುವಾಯ್‌ಮೊಳಿ |
| | | ತಾರ್ಥೋ | ತ್ವಾ |
| | | ಆಟಾ | ಆಚಾ |
| | 31 | ತಿರುಯ್ | ತಿರುವಾಯ್ |
| | 33 | ವೂಣ್ಣ | ಪೂಣ್ಣ |
| | | ಪು | ದು |

| ಪುಟ | ಅಶುದ್ಧ | ಶುದ್ಧ |
|---|---|---|
| 33 | ನಂಬಿಕೆ | ನಂಬಿ |
| | ವಶೇಷ | ವಿಶೇಷ |
| | ಕಿರಣ | ಕಿಣರು |
| 34 | ತಿರುಕಚ್ಚಿ | ಕುಚ್ಚಿ |
| | ವೇದ್ಯಂ | ವೇದ್ಯ |
| | ರಾಮಾನುಜ | ರಾಮಾನುಜರು |
| | ಧರ್ಮೋರಬ್ಧಾಃ | ಧೀಲಭ್ಧಾಃ |
| | ಧೀರ್ಮೋ | ಧರ್ಮೋ |
| 35 | ವೂರ್ಣ | ಪೂರ್ಣ |
| | ವನಸ್ಸಿ | ಮನಸ್ಸಿ |
| 36 | ಚೇತನಿಗೆ | ಚೇತನನಿಗೆ |
| 37 | ಶಿಚ್ಚವವನ್ | ಶಿಚ್ಚನವನ್ |
| | ಆಕ್ಕು | ಆರ್ಕ್ಕುಂ |
| 39 | ಅ | ಆ |
| 39 | ಪು | ವು |
| | ಶ್ | ಶ |
| 41 | ಜಿ | ಜ |
| | ಥಾ | ಧಾ |
| 42 | ಅಧಿಕ | ಅಧೀತ |
| 43 | ವ್ಮ್ರನ್ನ | ಶಮ್ಮ್ರನ್ನ |
| | ಕ್ಕ | ಕ್ಕೈ |
| | ಗಳಿಂದ | ಗಳಿಗಿಂತಲೂ |
| 44 | ನ್ನ | ನ್ನು |
| | ರ | ರೆಆ |
| 45 | ಪ್ರಸಾದಿಸಿ | ಪ್ರತಿಪಾದಿಸಿ |
| | ಶ | ತ |
| 46 | ಆ | ಅ |

## ವಿಶೇಷ ಪ್ರಾರ್ಥನೆ.

ವೈದಿಕೋತ್ತಮರಲ್ಲಿಯೂ ಮತ್ತು ವಿದ್ವಾಂಸರಲ್ಲಿಯೂ ವಿನಂತಿ.

"ಶ್ರೀ ರಾಮಾನುಜ ಭೂಷಣವರ್" ಪುಸ್ತಕವು ಈಗ ತಾನೇ ಮುದ್ರಣಾಲಯದಿಂದ ಹೊರ ಬಂದಿತು; ತಮಿಳು ಭಾಷೆಯಲ್ಲಿ ಪರಿಚಯವಿಲ್ಲದ ಪ್ರೆಸ್ಸಿನ ಕೆಲಸಗಾರರು ಮುದ್ರಣದಲ್ಲಿ ಕೆಲವು ತಪ್ಪುಗಳನ್ನು ಮಾಡಿರುತ್ತಾರೆ. ಓದುಗರು ಸರಿಪಡಿಸಿಕೊಂಡು ಶುದ್ಧಿ ಪತ್ರವನ್ನು ನೋಡಿ ಓದಬೇಕೆಂದು ವಿನಂತಿ.

ಶ್ರೀದೇವಿ,
ಯಾದವಾದ್ರಿ, (ಮಂಡ್ಯ)